ಜಯಕರ್ನಾಟಕ ಗ್ರಂಥಮಾಲೆಯ ೨೨ನೆಯ ಪುಷ್ಪ

# ಹೂಬಿಸಿಲು

( ಕಥಾಲಹರಿ )

---

ಕರ್ತೆ:

ಸೌ|| ಶ್ಯಾಮಲಾ ಬೆಳಗಾಂವಕರ

---

ಮೊದಲನೆಯ ಮುದ್ರಣ]                [ಬೆಲೆ ಹತ್ತು ಆಣೆಗಳು

೧೯೩೪

# ಎರಡು ಮಾತು

ನನ್ನ ಸಹಧರ್ಮಿಣಿಯ ಕಥಾಸಂಗ್ರಹವೊಂದನ್ನು ಯಕರ್ನಾಟಕ ಗ್ರಂಥಮಾಲೆಯ ಕುಸುಮವಾಗಿ ಪ್ರಕಟಿಸುವ ಂತೋಷಜನಕವಾದ ಸಂದರ್ಭವು ಇದೀಗ ಒದಗಿದೆ. ಅದು ತೀರ ಅಕಲ್ಪಿತವಾಗಿ ಬಂದಿತು. ಆಕೆ ನನಗೆ ಹಿಂದಕ್ಕೆ ಬರೆದ ಕೆಲವು ಪತ್ರಗಳಲ್ಲಿಯ ಕಥನಸರಣಿಯು ನನ್ನಲ್ಲಿ ಕೌತುಕವನ್ನುಂಟು ಮಾಡಿತು. ಆಗ 'ಪ್ರಚ್ಛನ್ನ ಕವಯಿತ್ರಿ' ಯೆಂದು ವಿನೋದದಿಂದ ಆಕೆಯನ್ನು ಕರೆದಿದ್ದೆನು. ಅದು ನಾಲ್ಕಾರು ವರ್ಷಗಳ ಹಿಂದಿನ ಮಾತು. ಇಲ್ಲಿಯ ಕತೆಗಳನ್ನು ಹೇಳುವ ಬಗೆ, ಅವುಗಳಲ್ಲಿ ಮಿಡಿಯುವ ಜೀವ—ಇವು ಕತೆಗಾರ್ತಿಯು ಅಪಕ್ವ ದೆಸೆಯನ್ನು ದಾಟಿದುದನ್ನು ತೋರಿಸುತ್ತಿವೆಯೆಂದು ನನ್ನ ಭಾವನೆ. ಹೆಚ್ಚು ಬರೆಯುವುದು ಸಮಂಜಸವಾಗಲಿಕ್ಕಿಲ್ಲವಾದುದರಿಂದ ಓದುಗರಿಗೆ ಈ ಮಾತಿನ ನಿಷ್ಕರ್ಷೆಯನ್ನು ಒಪ್ಪಿಸುವೆನು.

ಆದರೂ, ಶ್ರೀ. ಆನಂದಕಂದರು ಹೇಳಿರುವಂತೆ, ಉತ್ತರ ಕರ್ನಾಟಕದ ಸಾಹಿತ್ಯಕ್ಷೇತ್ರದಲ್ಲಿ ಪ್ರಥಮ ಪದಾರ್ಪಣ ಮಾಡುತ-ಲಿರುವ ಈ ಪ್ರಥಮ ಸ್ತ್ರೀಲೇಖಕರಿಗೆ ಸುಸ್ವಾಗತವನ್ನೀಯುವುದು ನನ್ನ ಕರ್ತವ್ಯ.

ಶ್ರೀ. ಜೈನೇಂದ್ರಕುಮಾರರ ಕಥಾಸಂಗ್ರಹವನ್ನು ಕನ್ನಡಿಸಿ ಕೊಡುವುದಾಗಿ ಮಾಡಿದ ಮೊದಲನೆಯ ನಿರ್ಣಯವು ತಪ್ಪಿ, ಏನೂ ನಿರೀಕ್ಷೆಯಿಲ್ಲದೆ ಈ ಕಥಾಲಹರಿಯನ್ನು ಗ್ರಂಥಮಾಲೆಯ ವಾಚಕರಿಗೆ ಸಲ್ಲಿಸಿದುದಾಯಿತು. ಇದರಲ್ಲಿಯ 'ನನ್ನನ್ನು ನೋಡಲಿಕ್ಕೆ ಬಂದಾಗ, ಎಂಬ ಕತೆಯು ಜಯಕರ್ನಾಟಕದ ೧೯೩೪ರ ಮಾರ್ಚ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿತ್ತು. 'ನಡೆದು ಬಂದ ಲಕ್ಷ್ಮಿ' ಹೋದ ವರ್ಷದ 'ನೀಳ್ಗತೆಗಳು' ಎಂಬ ಜ. ಕ. ಗ್ರಂಥಮಾಲೆಯ ಪ್ರಕಟನೆ-ಯಲ್ಲಿ ಒಂದು ಕತೆಯಾಗಿದ್ದಿತು.

**ಬೆಳಗಾವಿ ರಾಮಚಂದ್ರರಾಯರು**

ಧಾರವಾಡ ತಾ. ೨೨-೧೨-೩೬

# ಮುನ್ನುಡಿ

ನನ್ನನ್ನು ನಾನೆ ಅಭಿನಂದಿಸಿಕೊಳ್ಳಬೇಕಾಗಿದೆಯಿಾಗ ! ಕಾರಣ ವೇನೆಂದು ಕೇಳಿದರೆ, ಉತ್ತರ ಕರ್ಣಾಟಕದ ತೀರ ಹೊಸಬಗೆಯ ಗ್ರಂಥಕ್ಕೆ ಮುನ್ನುಡಿ ಬರೆಯುವ ಯೋಗ ನನಗೆ ಒದಗಿದೆ. ತುಂಗಭದ್ರೆಯಿಂದ ಉತ್ತರದ ಕನ್ನಡದಲ್ಲಿ ಲೆಕ್ಕಣಿಕೆಯನ್ನು ಹಿಡಿದ ಹೆಂಗುಸರೆ ಅಪರೂಪ; ಒಬ್ಬಿಬ್ಬರು ಇದ್ದಾರೆಯೆಂದು ಯಾರಾದರ ಹೇಳಿದರೂ ಸಂಪುಟರೂಪದಲ್ಲಿ ಇದುವರೆಗೆ ಯಾರ ಕೃತಿಯು ಬೆಳಕಿಗೆ ಬಂದಿಲ್ಲ. ' ಹೂಬಿಸಿಲು ' ಇದು ಉತ್ತರ ಕರ್ಣಾಟಕದ ಸ್ತ್ರೀಸಾಹಿತಿಯೊಬ್ಬರ ಮೊದಲನೇಯ ಗ್ರಂಥ; ಸ್ತ್ರೀನಿರ್ಮಿತ ಸಾಹಿತ್ಯಕ್ಷೇತ್ರದಲ್ಲಿಯೂ ಮೊದಲನೆಯ ಗ್ರಂಥ; ಉತ್ತರ ಕರ್ಣಾಟಕದ ಇಂದಿನ ಸಾಹಿತ್ಯದ ಚರಿತ್ರೆಯನ್ನು ಬರೆಯತೊಡಗಿದಾಗ ಸ್ತ್ರೀವಿಭಾಗ ದಲ್ಲಿ ಮೊದಲು ಹೆಸರುಗೊಳ್ಳಬೇಕಾದ ಗ್ರಂಥ. ಆ ಒಂದು ಭಾಗದ ಬೆಳಗಿನ 'ಹೂಬಿಸಿಲ'ನ್ನು ಹರಡಲಿಕ್ಕೆಂದು ಇದು ಮುಂದಡಿಯಿಟ್ಟಿದೆ.

ಈ ಸಂಗ್ರಹದಲ್ಲಿದ್ದುವುಗಳಲ್ಲಿ ಹೆಚ್ಚಾಗಿ ' ಸಣ್ಣಕತೆ ' ಗಳೆ ಇರುವುವಾದರೂ ಸಣ್ಣಕತೆಗಳ ಒರೆಗೆ ಇಳಿಯದ ಒಂದೆರಡು ಸರಸ ಲೇಖನಗಳೂ ಇವೆ. ಇವೆಲ್ಲವುಗಳಲ್ಲಿಯೂ ಹೆಚ್ಚಾಗಿ ನಾವು ಕಾಣು ತ್ತಿರುವುದು ಸ್ವಭಾವಚಿತ್ರಣವನ್ನೆ. ವಸ್ತುವಿಶೇಷವಾವುದನ್ನೂ ಒಳಗೊಂಡಿರದ ' ಮೂವರು ನಾಗರಿಕರು ' ' ಮಹಾಶಿವರಾತ್ರಿ ' ಎಂಬೆರಡು ಕೃತಿಗಳಂತೂ ' ಸ್ವಭಾವಚಿತ್ರ ' ಎಂಬುದೊಂದು ಹೊಸ ಸಾಹಿತ್ಯಜಾತಿಯನ್ನು ನಿರ್ಮಾಣಮಾಡಿಕೊಂಡಿವೆ. ' ಮಧುಮತಿ ' ' ಕೃಷ್ಣಿ ' ' ಶಾಂತಿ ' ಯರ ಹುಡುಗತನದ ಅಜ್ಞಾನವೂ ತುಂಟ ತನವೂ ನಮ್ಮನ್ನು ಹೊಟ್ಟೆತುಂಬ ನಗಿಸುವುವು. ' ಮಹಾಶಿವರಾತ್ರಿ ' ಯಲ್ಲಿಯ ಗೋವಿಂದನ ಎಳೆಯತನದ ರಸಿಕಜೀವನವು, ಬೆಳೆದಾಗ ಹೇಗೆ ಇರುತ್ತಿದ್ದಿತೆಂಬುದನ್ನು ನೋಡುವ ಭಾಗ್ಯವನ್ನು ಲೇಖಿಕೆ ಯರು ತಂದುಕೊಡದಿರುವುದಕ್ಕಾಗಿ ಅರಿಮ. ೀವರಾಗುವೆವು.

ಕಥಾವಸ್ತುವಿನಿಂದ ಕೂಡಿದುವಾಗಿದ್ದರೂ ‘ ದಾಜೀಬಾನ ಬ್ಯಾಂಕು ’ ‘ ದೊಡ್ಡಮ್ಮ ನೋಡಿದ ವರ ’ ‘ ನನ್ನನ್ನು ನೋಡಲಿಕ್ಕೆ ಬಂದಾಗ ’ ‘ ಬಕಪಕ್ಷಿ ’ ಎಂಬುವುಗಳೂ ವಾಸ್ತವ ಚಿತ್ರಗಳೆ! ದಾಜೀಬಾ ’ ನ ಸ್ವಭಾವ ಚಿತ್ರದೊಂದಿಗೆ ಆತನ ಸ್ವರೂಪವೂ ನಸುಮೂಡಿದೆ; ಆದರೆ ಚಿತ್ರದ ನಗೆಯ ಬಗೆಯು ಅದನ್ನು ಮರೆಮಾಡಿ ಬಿಡುತ್ತದೆ. ‘ ದೊಡ್ಡಮ್ಮ ನೋಡಿದ ವರ ’ ದಲ್ಲಿ ಕುತೂಹಲವನ್ನು ಹುಟ್ಟಿಸುವಂತಹ ವಸ್ತುರಚನಾ ಚಮತ್ಕೃತಿಯಿದೆ.

‘ ನೀಲಾ ’ ‘ಚಂದ್ರಿ’ ‘ದ್ಯಾಂವಕ್ಕ’ ಇವರ ಸ್ವರೂಪವನ್ನು ಕಂಡರಿಸುವ ಕಾರ್ಯದಲ್ಲಿ ಕತೆಗಾರ್ತಿಯರು ಸಾಕಷ್ಟು ನೈಪುಣ್ಯವನ್ನು ತೋರಿಸಿದ್ದಾರೆ. ‘ಸಿದ್ಲಿಂಗಗೌಡ’ನ ಕೈ ಹಿಡಿದಿದ್ದರೂ ತಿಂಗಳಲ್ಲಿ ಹದಿನಾರು ದಿನ ಶಂಕರಮಾವನ ಮನೆಗೆ ಬಂದುಹೋಗುವ ನೀಲೆಯೂ, ಹುಚ್ಚಿಯಾಗಿ ಹಂಚಿನ ಬಿಲ್ಲೆಗಳನ್ನು ಎಣಿಸುತ್ತ—ಹರಕು ಬಟ್ಟೆಗಳನ್ನು ಮಡಿಸುತ್ತ ಕುಳಿತುಕೊಳ್ಳುವ ಚಂದ್ರಿಯೂ, ಖಂಡಿತ-ವಾಗಿ ವಾಚಕರಿಂದ ಬಿಸಿಯುಸಿರನ್ನು ಕಸಿದುಕೊಳ್ಳುತ್ತಾರೆ. ‘ ಚೆಂಗಳಿಕವ್ವನಂತೆ ’ ಕಾಣುವ ‘ ‘ದ್ಯಾವಕ್ಕ’ ನ ಪೌರುಷ ಜೀವನವು ಓದುವವರನ್ನು ಆಶ್ಚರ್ಯದ ನೋಟದಿಂದ ನೋಡಲುತೊಡಗಿಸುತ್ತದೆ.

ಇನ್ನು ಇದರ ಭಾಷೆಯ ವಿಚಾರದಲ್ಲಿ ಹೇಳಬೇಕೆಂದರೆ ಹೆಚ್ಚಾಗಿ ಈ ಕಡೆಯ ‘ ಜೀವಂತ ’ ಭಾಷೆಯಲ್ಲಿಯೆ ಎಲ್ಲವನ್ನೂ ಬರೆದಿದ್ದಾರೆ. ವ್ಯಾಕರಣಶುದ್ಧಿಯನ್ನಪೇಕ್ಷಿಸುವವರು ಮಡಿವಂತರಾಗಿ ಇದರಿಂದ ದೂರಕ್ಕೆ ಉಳಿಯಬೇಕು. ಕನ್ನಡ ಭಾಷೆ ಇದೀಗ ಬೆಳೆಯುವ ಕಾಲ! ಇದರಲ್ಲಿ ಬಹುವಿಧವಾದ ಶಬ್ದಭಾಂಡಾರವು ಸೇರಿಕೊಳ್ಳಬೇಕಾಗಿದೆ. ಕನ್ನಡನಾಡಿನ ಬೇರೆ ಬೇರೆ ಕಡೆಯ ದೇಸಿ’ ಗಳಲ್ಲಿ, ನಮ್ಮ ನುಡಿಯ ಸೊಗಸನ್ನು ಹೆಚ್ಚಿಸುವಂತಹ ಶಬ್ದಗಳೂ, ಪದಪ್ರಯೋಗಗಳೂ, ವಾಕ್ಯಪದ್ಧತಿಗಳೂ ಇರುವುದರಿಂದ ಎಲ್ಲ ‘ ದೇಸಿ ’ ಗಳಲ್ಲಿ [illegible] ಇಂದು ಸಾಹಿತ್ಯರಚನೆಯಾಗಬೇಕಾಗಿದೆ;

ಈ 'ದೇಸಿ' ಗಳ ಕಡಲನ್ನು ಕಡೆದೇ ನಮ್ಮ ಹೊಸಗನ್ನಡ ಭಾಷೆಯ ಸುಧಾಸಾರವನ್ನು ಹೊರಕ್ಕೆ ತರಬೇಕಾಗಿದೆ. ಆ ಮಾಡಬೇಕಾಗಿದ್ದ ಕಾರ್ಯಕ್ಕೆ ಇಂತಹ ಭಾಷೆಯ ಗ್ರಂಥಗಳ ಆವಶ್ಯಕತೆ ನಮಗೆ ಇರುತ್ತದೆ.

ಶ್ರೀಮತಿಯವರ ' ಹೂಬಿಸಿಲು ಏರುಬಿಸಿಲೂ ಆಗಲಿ! ಕನ್ನಡಿಗ-ಕನ್ನಡಿತಿಯರ ಬುದ್ಧಿಗೆ ಬೆಳಕಿನ ಲೋಕವನ್ನು ತಂದು-ಕೊಡಲಿ !

ಧಾರವಾಡ
ತಾ. ೨೨—೧೨—೩೬

ಬೆಟಗೇರಿ ಕೃಷ್ಣಶರ್ಮ

# ಅರಿಕೆ

ನನ್ನ ಕತೆಗಳ ವಿಚಾರವಾಗಿ ಈಗಾಗಲೆ ಸಾಕಷ್ಟು ಹೇಳಿಯಾಗಿದೆಯೆಂದಮೇಲೆ ನಾನು ಹೇಳಬೇಕಾದುದೇನಿದೆ? ನಾನೇನು "ಕತೆಯತಂತ್ರ" ವನ್ನು ಅಭ್ಯಾಸಿಸಿಕೊಂಡು ಬರೆಯಲು ಪ್ರಯತ್ನ ಪಟ್ಟವಳಲ್ಲ. ಅರಿತ ನುರಿತ ಲೇಖಕವರ್ಗಕ್ಕೆ ಸೇರಿದವಳಲ್ಲ.

ಮೊಟ್ಟಮೊದಲು, ಕೆಲಸಬೊಗಸೆಗಳನ್ನು ಮಾಡಿ ಮಿಕ್ಕ ವೇಳೆಯಲ್ಲಿ ನನ್ನ ಮನರಂಜನೆಗೆಂದು "ನನ್ನನ್ನು ನೋಡಲಿಕ್ಕೆ ಬಂದಾಗ—" ಎಂಬುದನ್ನು ಬರೆದೆ. ಅದನ್ನೋದಿದ ನನ್ನ ಬಂಧುವರ್ಯರಾದ ಶ್ರೀ ಹ. ಪೀ. ಜೋಶಿಯವರು ಮತ್ತು ನನ್ನ ಪತಿರಾಯರು ಸಂತೋಷಬಟ್ಟು, ಜಯಕರ್ನಾಟಕದಲ್ಲಿ ಅದಕ್ಕೆ ಪ್ರವೇಶ ಮಾಡಗೊಟ್ಟರು. (ಮಾರ್ಚ ೧೯೩೪).

ಅದು ಪ್ರಕಟವಾದಕೂಡಲೆ ರೆಕ್ಕೆ ಬಲಿಯದ ಹಕ್ಕಿಯನ್ನು, ಅದು ಹಾರಲು ಕಲಿಯಲೆಂದು ಗೂಡಿನ ಹೊರಕ್ಕೆ ತಂದಿರಿಸಿದಂತಾಯಿತು. ಕಟ್ಟುಕತೆಗಳನ್ನು ಸುಂದರ ಶೈಲಿಯಲ್ಲಿ ಬರೆಯುವಷ್ಟು ಚತುರಳಂತೂ ನಾನಲ್ಲ. ನನ್ನ ಸುತ್ತಮುತ್ತಲೂ ನಡೆದ ಸಣ್ಣಪುಟ್ಟ ವರ್ತಮಾನಗಳನ್ನೇ ಏನೋ ಒಂದು ಬಗೆಯಲ್ಲಿ ಆಗಾಗ ನಾನು ಬರೆದಿಡುತ್ತಿದ್ದುದು. ಅಂತಹವುಗಳಲ್ಲಿ 'ನಡೆದುಬಂದ ಲಕ್ಷ್ಮಿ' ಯೊಂದು. ಜ. ಕ. ಗ್ರಂಥಮಾಲೆಯವರು ಅದನ್ನು ಪೋಣಿಸಿಕೊಂಡುಬಿಟ್ಟರು. ಈ ಸಂಗ್ರಹದಲ್ಲಿಯ ಉಳಿದ ಕತೆಗಳು ಇತ್ತೀಚೆಯ ೨-೩ ತಿಂಗಳಲ್ಲಿ ಬರೆದುವು. 'ಹೇಗೆ ಬರೆಯಬೇಕು' ಎಂದು ವಿಚಾರಿಸುತ್ತ ಕುಳಿತಾಗ, 'ಬರೆಯಿರಿ, ಬಂದುಬಿಡುವುದು' ಎಂದು ಪ್ರೋತ್ಸಾಹಿಸಿ, ಇನ್ನು ಬೇರೆ ಬಗೆಯಿಂದ ಸಲಹೆಯಿತ್ತ ಬಂಧುವರ್ಯ ಹ. ಪೀ. ಜೋಶಿಯವರನ್ನು ಇನ್ನೊಮ್ಮೆ ಅಭಿವಂದಿಸುವೆನು.

ಇನ್ನು ' ಹೂಬಿಸಿಲ ' ನ್ನು ಜಗತ್ತಿನಲ್ಲೆಲ್ಲ ಹರಡಲು ಬಯಸಿದ ನನ್ನ ಪತಿಯವರಲ್ಲಿ ನಾನಾವ ರೀತಿಯಲ್ಲಿ ನನ್ನ ಕೃತಜ್ಞತೆಯನ್ನು ಸೂಚಿಸಲಿ ?

ಎಲ್ಲ ಕತೆಗಳೂ ಸುತ್ತುಮುತ್ತಲೂ ನಾನು ಕಂಡುವುಗಳೇ. ಆದರೆ ' ಮಹಾಶಿವರಾತ್ರಿ 'ಯೊಳಗಿನ ಗೋವಿಂದನ ಕತೆ ಪ್ರತ್ಯಕ್ಷ ನನ್ನ ತಮ್ಮನದು. ಆತನು ತೀರಿ ಹೋಗಿ ನಾಲ್ಕು ತಿಂಗಳಾಯಿತು. ಅದು ಕತೆಯಲ್ಲ—ನನ್ನ ದುಃಖಶಮನವನ್ನು ಕ್ಷಣಮಾತ್ರವಾಗಿಯಾದರೂ ಮಾಡಿಕೊಳ್ಳಲೆಂದು, ವಾಚಕರೆದುರು ತೋಡಿಕೊಂಡ ಅಂತರಂಗದ ಅಲ್ಲೋಲಕಲ್ಲೋಲ !!

ತಮ್ಮ ಅಧಿಕಾರವಾಣಿಯಿಂದ ಮುನ್ನುಡಿ ಬರೆದು ಆಶೀರ್ವದಿಸಿದ ಅಣ್ಣಂದಿರಾದ ಬೆಟಗೇರಿಯವರಿಗೆ ನನ್ನ ವಂದನೆಗಳು.

—ಶ್ಯಾಮಲೆ

೨೩—೧೨—೩೬

# ಪರಿವಿಡಿ

# ಮೂವರು ನಾಗರಿಕರು

ಮಧುಮತಿಯೂ, ಕೃಷ್ಣಿಯೂ, ಶಾಂತೆಯೂ ಅತ್ಯಂತ ಜೀವದ ಗೆಳತಿಯರು. ಮೂವರೂ ಎಂಟರಿಂದ ಹತ್ತರ ಒಳಹೊರಗಿನ ವಯಸಿನವರು. ಮೂವರೂ ಹೋಗುತ್ತಿದ್ದುದು ಮ್ಯುನಿಸಿಪಾಲಿಟಿ ಶಾಲೆಗೆ, ಕಲಿಯುತ್ತಿದ್ದುದು ಕನ್ನಡ ನಾಲ್ಕನೇ ಇಯತ್ತೆಯಲ್ಲಿ.

ಒಂದು ದಿವಸ ಅವರ ಶಾಲೆಯು ಸುರುವಾದ ಅರ್ಧ ತಾಸಿನಲ್ಲಿಯೇ ಬಿಟ್ಟುಬಿಟ್ಟಿತು. ಮೂವರೂ ಶಾಲೆಯ ಹೊರಗೆ ಬಂದರು. ಶಾಂತೆಯು ಕೇಳಿದಳು:

" ಅಲ್ರೀ, ಮಧುಮತೀ, ಕೃಷ್ಣೀ, ನಮ್ಮ ಸಾಲ್ಯಾಕ ಇವೊತ್ತ ಲಗೂ ಬಿಟ್ಟದ್ರೀ ? "

ಆದಕ್ಕೆ ಮಧುಮತಿಯು ಹೇಳಿದಳು "ಇಷ್ಟೂ ತಿಳೂದುಲ್ಲೇನ ? ಇವೊತ್ತ ನಮ್ಮ ಸಾಲೀ ಮುನಿಸಿಪಾಲಿಟೀ ಮೆಂಬರ್ರು ಸತ್ತಾರಂತ!! "

" ಅಯ್ಯ, ಮೆಂಬರ್ರು ಸತ್ತ ಘಳಿಗ್ಗೆ ಸಾಲಿಗೆ ಸೂಟೀ ಆಗತಿದ್ರ, ದಿನಾನು ಒಬ್ಬ ಮೆಂಬರ್ರು ಸಾಯವಲ್ರ್ಯಾಕ ಬಿಡೂ, ಅಂದ್ರ ದಿನಾನೂ ನಮಗ ಆಡಲಿಕ್ಕೆ ಸೂಟೀನರ ಸಿಕ್ಯಾಂಗಾಗತದ. " ಕೃಷ್ಣಿಯು ಎಂದಳು.

ಆದಕ್ಕೆ ಶಾಂತಿಯೆಂದಳು " ಏ ಕೃಷ್ಣೀ, ಕರೇ ಭ್ರಷ್ಣೀ, ಎಲ್ಲಾ ಮೆಂಬರ್ರು ಸತ್ರ ನಿನಗೇನ ಬರೋದು ? ಆ ಮೆಂಬರ್ರೆಲ್ಲಾ ಇದ್ದಾರಂತ ನಮ್ಮ ದಶಿಂದ ಸಾಲೀ ತಗದ್ರೂ; ವರ್ಷಾ ವರ್ಷಾ ಅವರಽನವ್ವಾ ನಮಗೆಲ್ಲಾ ಇನಾಮು ಕೊಡಾವ್ರು. "

ಮಧುಮತಿಯೆಂದಳು " ಅಲ್ಲಽ ಎಲ್ಲಾರು ಸತ್ರ ಮತ್ತ ನಮ್ಮ ಸಾಲೀನೂ ಮುಳಿಗೀತಲ್ಲ ? ಆ ಮ್ಯಾಲೆ ನಾವೇನು ಮನೀವಳಗ ಬರೇ ತಮ್ಮಂದ್ರನ್ನಾಡಿಸಿಗೋತನ ಕೂಡ್ರಬೇಕಂತೀಯೇನು ? "

ಕೃಷ್ಣಿಯೆಂದಳು " ಸಾಕ ಬಿಡ್ರೀ ನಮ್ಮವ್ವಾ, ಒಂದು ಸ್ವಲ್ಪ ಅಂದದ್ದಕ್ಕ ಎಷ್ಟು ಹಂಗಸ್ಲಿಕ್ಹತ್ತೀರಿ ನನಗ. ಅಲ್ಲೆ ನೋಡ್ರಿ, ಗಂಡ ಹುಡುಗರ ಸಾಲೀನೂ ಬಿಡ್ಲಿಕ್ಹತ್ತ್ಯಾರ !! "

ಶಾಂತಿಯೆಂದಳು " ಮತ್ತ, ಆ ನಮ್ಮ ಅಕ್ಕನವ್ರಹಾಂಗ, ಅವರ ಮಾಸ್ತರ್ರೂ ಮೆಂಬರ್ರ ಮಣ್ಣಿಗ್ಹೋಗತಾರ ಕಾಣಸ್ತದ, ಅದಕ ಬಿಟ್ಟಾರ ಅವರ ಸಾಲೀನೂ. "

ಅದಕ್ಕೆ ಮಧುಮತಿಯೆಂದಳು " ಅದೆಲ್ಲಾ ಇರ್ಲಿ ಬಿಡ್ರೀ, ಹ್ಯಾಂಗೂ ಅನಾಯಾಸಾ ಸಾಲಿ ಇವ್ರೊತ್ತ ಲಗೂ ಬಿಟ್ಟೇದ, ಮೂರೂ ಮಂದಿ ಹೋಗಿ, ಆ ಸತ್ತ ಮೆಂಬರ್ರ ಮಾರೀನರ ಅಷ್ಟ ನೋಡಿಕೊಂಡು ಬರೋಣ, ಬರ್ರೀ ? "

ಇಬ್ಬರೂ " ಹುಮ್ಮಾ, ನಡೀರೆ, ನೋಡ್ಯಾರ ಬರೋಣ, ಪಾಪ. " ಎಂದರು.

ಅಷ್ಟರಲ್ಲಿ ಎದುರಿಗೊಂದು ಎಕ್ಕಾದಲ್ಲಿ ಬ್ಯಾಂಡು ಕೇಳಿಸಿತು.

ಶಾಂತಿಯೆಂದಳು " ಏ, ಲಗೂನ ಓಡಿ ಆ ಎಕ್ಕಾಗಾಡಿ ಮುಟ್ಟೆ, ಸಿನೇಮಾದ ಹ್ಯಾಂಡಬಿಲ್ಲು ಯಾರ ಮುಂಚೆ ಇಸಗೋತೆವೋ ? "

"ಹುಮ್ಮ" ಎಂದವರೇ ಮೂವರೂ ರಪಾಟಿ ಓಡಲಾರಂಭಿಸಿದರು. ಗೌಳೀಗಲ್ಲಿಯ ಅರ್ಧದ ಸುಮಾರಿಗೆ ಮೂವರೂ ಒಮ್ಮೆಲೇ ಗಾಡಿಯನ್ನು ಮುಟ್ಟಿದರು. ಹ್ಯಾಂಡಬಿಲ್ಲು ಹಂಚುವವನು ಹತ್ತೆಂಟು ಹಾಳೆಗಳನ್ನು ದೂರವಾಗಿ ಎಸೆದನು; ಒಬ್ಬೊಬ್ಬರು ಒಂದೊಂದು ಎರಡೆರಡು ಕೈಯ್ಯಲ್ಲಿ ಹಿಡಿದುಕೊಂಡು ಹಿಂದಕ್ಕೆ ತಿರುಗಿ, ಪೇಟೆಯ ದಾರಿ ಹಿಡಿದರು.

ಮಟಮಟ ಮಧ್ಯಾಹ್ನ. ಟಾವರಕ್ಲಾಕ್‌ನಲ್ಲಿ ಆದೇ ಹನ್ನೆರಡು ಬಡಿಯತೊಡಗಿತ್ತು. ಗೆಳತಿಯರು ಹನ್ನೆರಡನೆಯ ಕಡೆಯ ಗಂಟೆ ಬಾರಿಸುವ ವರೆಗೂ ಬಿಲ್ಡಿಂಗಿನೆದುರಿಗೆ ನಿಂತು, "ಒಂದೋ, ಎರಡೋ,

ಮೂರೋ,........ಹನ್ನೆರಡೋ. ” ಎಂದವರೇ ಮುಂದಕ್ಕೆ ಸಾಗಿದರು. ಮಾರ್ಕೆಟು ರೋಡಿನೊಳಗೆ ದೊಡ್ಡದೊಡ್ಡ ಗೋಡೆಗಳಿಗಂಟಿಸಿದ ಬಗೆ-ಬಗೆಯ ಜಾಹೀರಾತುಗಳನ್ನು ಓದುವದು, ಬರದಿದ್ದರೆ ಓದಲೆತ್ನಿಸು-ವದು, ಅದೂ ಆಗದಿದ್ದರೆ ಕಡೆಗೆ ಸಿನೇಮಾದ ಚಿತ್ರಗಳನ್ನು ಸ್ವಲ್ಪ-ಸ್ವಲ್ಪ ನೋಡಿಕೊಳ್ಳುತ್ತ ಮುಂದೆ ನಡೆಯುವದು, ಹೀಗೆಯೇ ಸಾಗಿದರು. ಉಡಪೀ ಬ್ರಾಹ್ಮಣರ ಚಹಾದ ಅಂಗಡಿಯೊಂದರ ಎದುರಿಗೆ ಬಂದರು. ಕೃಷ್ಟಿಯು:

“ಏ ಸ್ವಲ್ಪು ನಿಂದರ್ರೀ, ಫೊನೋಗ್ರಾಪ ಹಚ್ಯಾರ, ಪದಾ ಏನ ಇಂಪಾಗೇದ, ಕೇಳೋಣಾ? ” ಎರಡು ನಿಮಿಷ ನಿಂತರು. ಅಷ್ಟರಲ್ಲಿ ಶಾಂತೆಯು, “ ಅಲ್ಲಿ ನೋಡು ಮಧುಮತೀ, ಈ ಕೃಷ್ಟೀ ಮಾತ ಕೇಳಿ ನಾವೆಲ್ಲಾ ಪದಾ ಕೇಳ್ಳಿಕ್ಕೆ ನಿಂತ್ವೀ ಖರೇ, ಆದರ ಒಳಗಿಂದ ಯಾರೋ ಇಬ್ರು ನಮ್ಮಕಡೇ ನೋಡಕೋತ ನೋಡಕೋತ ಏನೇನರ ಮಾತಾಡಕೊಳ್ಳಿಕ್ಹತ್ಯಾರ ನೋಡು. ”

ಅಗ ಮಧುಮತಿಯು “ ಹೌದವ್ವಾ, ನಾವು ಹಾಡ ಕೇಳಿದ್ವೆಂತ ಅಂಗಡೀಯವರಿಗೆ ಗೊತ್ತಾತ ಕಾಣಸ್ತದ, ನಮಗ ರೊಕ್ಕಾ ಕೇಳಬೇಕಂತ ಸಿಟ್ಲೇ ನೋಡ್ಲಿಕ್ಹತ್ಯಾರ ನಮ್ಮ ಕಡೇ. ”

ಶಾಂತಿ “ ಹೌದೇ ಕೃಷ್ಟೀ, ನಾವೇನ ಗಂಡಸರ್ಹಾಂಗ ರೊಕ್ಕಾ ಕೊಟ್ಟು ಚಹಾ ಕುಡಿಲಿಕ್ಕೆ ಬಂದಾನ್ರ, ನಡೀರಿ ಹೋಗೋಣಾ. ” ಎಂದಳು.

ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ, ಪೋಲೀಸ ಚೌಕಿಯ ಎದುರಿಗೊಂದು ಭರಮಪ್ಪದೇವರ ಕಲ್ಲನ್ನು ಕಂಡರು. ಶಾಂತಿಯೆಂದಳು:

“ಏ ಕೃಷ್ಟೀ, ಹ್ಯಾಂಗೂ ಇಲ್ಲೀತನಕಾ ಬಂದೇವಿ, ಪರೀಕ್ಷಾದ ಫಲಾ ಕಟ್ಗೋಣ ಬರ್ರೀ? ”

ಮಧುಮತಿಯ ಕಿಸೆಯಲ್ಲೊಂದು ದುಡ್ಡು ಇತ್ತು. ಎದುರಿಗಿದ್ದ ಮಿಠಾಯಿಗಾರನಲ್ಲಿ ಚುರಮುರಿಯನ್ನು ಕೊಂಡರು. ಪ್ರತಿಯೊಬ್ಬಳೂ

ಐದ್ಪೈದು ಚಿಮಟಿಗೆ ಕಾಳುಗಳನ್ನು ಭರಮಪ್ಪನ ಮುಂದಿಟ್ಟು, ಗಲ್ಲ-ಗಲ್ಲ ಬಡಿದುಕೊಂಡು ಕೈಮುಗಿದರು. ಕಲ್ಲನ್ನು ಮೇಲಕ್ಕೆತ್ತಲೆತ್ನಿಸಿದರು; ಅದು ಇದ್ದಲ್ಲಿಯೇ ಸ್ವಲ್ಪ ಮಿಸುಕಾಡಿತು ಹೊರತಾಗಿ ಎತ್ತಲಿಕ್ಕೆ ಬರಲಿಲ್ಲ.

ಆಗ ಮಧುಮತಿಯು, "ಇನ್ನೊಮ್ಮೆ ಅಭ್ಯಾಸಾ ಚಲೋ ಮಾಡಿಕೊಂಡು ಬರೋಣಂತ ನಡೀರೀ? ಸುಮ್ಮನ ಮರಗೋದ್ಯಾಕ?" ಎಂದಳು.

ಎಲ್ಲರೂ ಸಮಾಧಾನದಿಂದ ಸಾಗುತ್ತಿರುವಾಗ ಬಳಿಯಲ್ಲಿದ್ದ ಕೆರೆಯ ದಂಡೆಯ ಮೇಲೊಂದು ಮಂಗಣ್ಣನ ಆಟ ನಡೆದದ್ದು ಕಂಡಿತು; ಗೆಳತಿಯರು ಕ್ಷಣಹೊತ್ತು ನೋಡಲು ಚುರಮುರಿ ಮುಕ್ಕುತ್ತಲೇ ನಿಂತರು. ಮೂವರ ಕೈಯಲ್ಲಿ ಚುರಮುರಿಯನ್ನು ನೋಡಿದ ಕೂಡಲೆ ಮಂಗಣ್ಣ ಹುಚ್ಚನಾದನು, ತನ್ನ ಆಟಪಾಟವನ್ನೆಲ್ಲ ಬಿಟ್ಟುಕೊಟ್ಟವನೇ ಹಲ್ಲು ಕಿರಿಯುತ್ತ ಇವರ ಬಳಿ ಓಡಿ ಬಂದನು; ಗೆಳತಿಯರು ಗಾಬರಿಯಾಗಿ ಅಲ್ಲಿಂದ ಕಾಲ್ತೆಗೆದರು.

ಮಾರ್ಕೇಟಿನ ತುಟ್ಟತುದಿಗೆ ಬಂದರು. ಅದೊಂದು ಕಡೆಯ ಅಂಗಡಿ; ಅರ್ಧರ್ಧ ಬಾಗಿಲಿನದು.

ಕೃಷ್ಣಿಯೆಂದಳು "ಹಗಲ ಹೊತ್ತು ಗ್ಯಾಸಲಾಯಿಟ ಹಚ್ಚ್ಯಾರಲ್ರೀ ಒಳಗ?"

ಶಾಂತೆಯು "ಕಾಣಸ್ತಿರಲಿಕ್ಕಿಲ್ಲಾ, ಅಲ್ಲೇ ಬೋರ್ಡನೋ ಬರದ ಹಚ್ಚ್ಯಾರ ನೋಡs ಮಧುಮತಿ?" ಎಂದಳು.

ಮಧುಮತಿಯು ಓದಿದಳು "ಹೇಅರ ಕಟಿಂಗ ಸಲ್ಲೂನು."

ಕೃಷ್ಣಿಯು ಕೇಳಿದಳು "ಅಯ್ಯ ಹಾಂಗಂದ್ರೇನ ನಮ್ಮವ್ವಾ?"

ಶಾಂತೆ ಉತ್ತರಕೊಟ್ಟಳು, "ಹಾಂಗಂದ್ರ, ನಮ್ಮಣ್ಣಾ ಮೊನ್ನೆ ತನ್ನ ಒಂದು ಇಂಗ್ಲೀಷ ಪುಸ್ತಕದಾಗಿನದೊಂದು ಚಿತ್ರಾ

ತೋರಿಸಿದಾ. ಅದು ಮೀನದ ಆಕಾರದ್ದಾಂಗಿರತದ—ವಿಮಾನಂತ ಸಲ್ಲೂನ ಅಂದ್ರ ವಿಮಾನಂತ ಕಾಣಸ್ತದವ್ವಾ."

ಮಧುಮತಿಯೆಂದಳು "ಹಾಂಗಾದ್ರ ಇಲ್ಲೇ ಆಡೋವು ಕಾಗದದ್ದು ಇಲ್ದಿದ್ರ ಕರ್ಪರದ್ದು ವಿಮಾನ ಸಿಗತಿರಬೇಕು." ಕಟಿಂಗ ಸಲ್ಲೂನಂತ ಬರದಾರಲ್ಲ, ಅಂದ ಮ್ಯಾಲೆ ಕಟ್ಟಿಗೀವ ಇರಬೇಕು ನೋಡು."

ಕೃಷ್ಣಿಯೆಂದಳು "ಇಷ್ಟೆಲ್ಲಾ ಪಂಚೇತಿ ಯಾಕವ್ವಾ ಅದು? ಥಣ್ಣಾಗ ಅಂವಗ, ಕೇಳಿದರಾತು? ....ಏನಪ್ಪಾ ಹ್ಯಾಂಗೊಂದು ಸಲ್ಲೂನ ಮಾಡಿಕೊಡತೀದಿ?"

ಅಂಗಡಿಯವನು ಮೊದಲು ಬೊಳ್ಳೆಂದು ನಕ್ಕನು. "ತಂಗೆಮ್ಮಾ ನೀವಿಲ್ಲೆ ಬರಬಾರ್ದು—ಇದು ಹಜಾಮತೀ ಮಾಡೋ ಅಂಗಡಿ." ಎಂದನು.

ಮೂವರೂ ಪೆಚ್ಚು ಮುಖದಿಂದ ಓಡಿದರು. ಸ್ವಲ್ಪ ದೂರ ಹೋದ ಕೂಡಲೆ, ಸ್ಪೀಡ' ಮತ್ತೆ ಕಡಮೆಯಾಯಿತು; ಆದರೆ ನಗೆಗಾರಂಭವಾಯಿತು. "ಏನು ಹುಚ್ಚುಚ್ಚಾರ ಕೇಳ್ದೀ ಕೃಷ್ಣೀ ಅಂಗಡೀಯಾಂವಗ?" ಎಂದಳು ಮಧುಮತಿ.

ಕೃಷ್ಣಿಯೆಂದಳು "ಆಹಾ, ನೀವೇನು ಭಾಳ ಶ್ಯಾಣ್ಯಾರು...... ಮದ್ಲ ಕಳುವುಮಾಡ್ಲಿಕ್ಕೆ ಹೇಳೋದು, ಅಲ್ಲಿಂದ ಕಳ್ಳಗನ ಹೆಸರಿಡೋದು...." ಮತ್ತೆ ನಗುವಿಗಾರಂಭ. ಆ ಕಿಡಿಗೇಡಿ ಶಾಂತೆಗೆ ಇಷ್ಟರ ಮೇಲಿಂದ ಮನಸು ತೃಪ್ತಿಯಾಗಲಿಲ್ಲ.

"ಹಾಂಗಾರ ನಮ್ಮ ಗಂಗತ್ತ್ಯಾ ತಿಂಗಳಿಗೊಮ್ಮೆ ಮೈಲಿಗ್ಯಾಗಲಿಕ್ಕಿಲ್ಲೇ ಬರ್ತಾಳ ಕಾಣಸ್ತದವ್ವಾ; ಇನ್ನೂ ನಾ ಎದ್ದಿರೂದುಲ್ಲ ನೋಡು; ಅಷ್ಟು ಬೆಳಗು ಹರಿಯೋದೊರೊಳಗ ಮಡೀ ಉಟಗೊಂಡು ಅಡಿಗ್ಗಿ ಕೂತಿರತಾಳ."

ಆಯಿತು. ಮೂವರೂ ಕಿಡಿಗೇಡಿ ಮಂಗಗಳಂತೆಯೇ ಇದ್ದರು. ಹಾಗೊಮ್ಮೆ, ಹೀಗೊಮ್ಮೆ, ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ ಮಣಿಯುತ್ತ, ನಡನಡುವೆ ಹೊಟ್ಟೆಯನ್ನು ಹಿಡಿದುಕೊಳ್ಳುತ್ತ, ಕಣ್ಮುಚ್ಚಿ ಕಣ್ತೆಗೆಯುತ್ತ, ನಗುತ್ತ ನಗುತ್ತ ಸಾಗಿದ್ದರು. ಅಷ್ಟರಲ್ಲಿ, ಎದುರಾಗಿ ಬರುತ್ತಿದ್ದ ಒಂದು ಆಕಳ ಕರುವು ಕೃಷ್ಟಿಗೆ ಹಾಯ್ದದ್ದ-ರಿಂದ, ಮೂವರ ಮೈಮೇಲೆಯೂ ತಾವು ದಾರಿ ನಡೆಯುತ್ತಿರುವೆವೆಂಬ ಎಚ್ಚರ ಬಂದಿತು. ಎದುರಿಗೆನೇ ಮುನಿಸಿಪಾಲಿಟಿಯ ಹಿತ್ತಿಲು ಬಾಗಿಲು.

ಮೂವರೂ ಕಾಂಪೌಂಡಿನಲ್ಲಿ ಕಾಲಿಟ್ಟರು. ಅದಕ್ಕೊಂದು ಪ್ರದಕ್ಷಿಣೆ ಹಾಕುತ್ತ ಹೆಬ್ಬಾಗಿಲ ಕಡೆಗೆ ಹೊರಟರು. ಹೌದಿನಲ್ಲಿ ಪುಟಿಯುತ್ತಿರುವ ಕಾರಂಜಿಗಳ ಮೇಲೆ ಮುಖ ಹಿಡಿಹಿಡಿದು ಸಕ್ಕರು ಗಿಡಬಳ್ಳಿಗಳನ್ನೆಲ್ಲ ನೋಡಿದ್ದಾಯಿತು. ಮೂವರೂ ಒಂದೊಂದು ಡೇರೆಯ ಹೂವುಗಳನ್ನು ತಲೆಯಲ್ಲಿ ಸಿಕ್ಕಿಸಿಕೊಂಡರು. ಅಷ್ಟರಲ್ಲಿ ಅಲ್ಲೊಂದು ಊದುವ ಗುಬ್ಬಿಗಳ ಗಿಡವು ಕಂಡಿತು. ಮೆಲ್ಲಗೆ ಯಾರಿಗೂ ಕಾಣದಂತೆ ಪ್ರತಿಯೊಬ್ಬರೂ ಒಂದೊಂದು ಗುಬ್ಬಿಯನ್ನು ಹರಿದು-ಕೊಂಡು ಕಿಸೆಯಲ್ಲಿಟ್ಟುಕೊಂಡರು. ಮೊದಲನೇ ಕೋಣೆಯೊಂದರಲ್ಲಿ ಮೆಲ್ಲನೆ ಇಣಿಕಿದರು.

ಕೃಷ್ಟಿಯು "ಅಲ್ಲೆ ನೋಡ ಶಾಂತ್ಯಾ, ಬಾಜಾಪೆಟ್ಟಿಗೀ ಅಂಥಾವರ ಮ್ಯಾಲೆ ಒಬ್ಬಾವಾ ಬಿರಡೀ ಹ್ಯಾಂಗ ಟಪಾ ಟಪಾ ಒತ್ತಲಿಕ್ಹತ್ತ್ಯಾನ?" ಎಂದಳು.

ಶಾಂತೆಯೆಂದಳು. "ಹೌದೇಳ ಧಡ್ಡೀ, ಅದಕ ಟೈಪ ಹೊಡಿಯೋ ಮಶೀನಂತಾರ; ನಮ್ಮಣ್ಣಾ ಮನ್ಯಾಗ ದಿನಾನೂ ಸುರೂ ಮಾಡಿರತಾನ ಕಿಟಕಿಟೀನ. ಯಾವ ಅಕ್ಷರದ ಮ್ಯಾಲೆ ಬಟ್ಟಿಡತಾರ ನೋಡು, ಅದs ಅಕ್ಷರಾನs ಕೆಳಗಿನ ಕಾಗದದ ಮ್ಯಾಲೂ ಮೂಡ್ತದಂತ."

ಮುಂದಿನ ಹಾಲಿನಲ್ಲಿ ನೋಡಿದರು: ಒಂದಿಬ್ಬರು ಒಂದೇ ಸಮನೆ ನೋಟುಗಳನ್ನೆಣಿಸುತ್ತಿದ್ದರು. ಒಬ್ಬಿಬ್ಬರು ರೂಪಾಯಿಗಳನ್ನು ಬಾರಿಸುತ್ತ ಎಣಿಸುತ್ತ ಚೀಲಕ್ಕೆ ತುಂಬುತ್ತಿದ್ದರು. ಒಬ್ಬನು ಏನೇನೋ ಬರೆಯುತ್ತ ಉಳಿದವರನ್ನು ಏನೇನೋ ಕೇಳುತ್ತ, ಕುಳಿತಿದ್ದನು.

ಆಗ ಮಧುಮತಿಯೆಂದಳು "ಅಪ್ಪಯ್ಯಾ, ಇಷ್ಟ ರೂಪಾಯಿನ್ನ ನನ್ನ ಕೈಯೊಳಗ ಕೊಟ್ಟಿದ್ರ, ಏನ ಹೇಳ್ತೀವ್ಯಾ, ಭಂಗಾರದ ಮನೀನ ಕಟ್ಟಿಸಿಬಿಡ್ತಿದ್ದೆ.........ಏನು ಮಾಡಲಿ ?"

ಶಾಂತೆಯು ಪ್ರಶ್ನಿಸಿದಳು. "ಅಯ್ಯ, ಮತ್ತ ಘಕ್ನ ಯಾರಾರ ಭಂಗಾರದ ಮನೀ ಕೆಡವಿ ಭಂಗಾರಾ ಎಲ್ಲಾ ತುಡುಗಮಾಡಿ ಒಯ್ದು ವಸ್ತಾ ಮಾಡಿಸಿಗೊಂಡು ಬಿಟ್ರ ?"

ಕೃಷ್ಣಿಯೆಂದಳು "ಅವರ್ನ ಹಿಡಿದೊಯ್ದು ಪೋಲೀಸರ ಕೈಯೊಳಗ ಕೊಟ್ರಾತೂ."

ಇದೇ ಬಗೆಯಿಂದ ಅನೇಕ ದೃಶ್ಯಗಳನ್ನು ನೋಡುತ್ತ ಹರಟಿ ಹೊಡೆಯುತ್ತ ಬಿಲ್ಡಿಂಗನ್ನು ಕಂಡು ಹೆಬ್ಬಾಗಿಲಿನ ಬಳಿಗೆ ಬಂದರು.

ಮುಂಚೀ ಬಾಗಿಲನೆದುರಿಗಿನ ಕಮಾನುಬುಡದಲ್ಲಿ ಇಬ್ಬರು ಮೂವರು ಜರಿಯ ರುಮಾಲಿನವರು ಗುಜುಬುಜೆಂದೇನೋ ಮಾತನಾಡುತ್ತಿದ್ದರು. ಬಾಗಿಲಬಳಿ ನಾಲ್ಕೈದುಮಂದಿ ಜವಾನರು ಮೆಲ್ಲಗೆ ಪಿಸುಗುಡುತ್ತ ನಡುನಡುವೆ ಜರಿಯ ರುಮಾಲಿನವರ ಕಡೆಗೆ ನೋಡುತ್ತ ನಿಂತಿದ್ದರು.

ಮಧುಮತಿಯೆಂದಳು "ಹಾ, ಇಲ್ಲೇ ಎಲ್ಲ್ಯಾರ ಅವರ ಹೆಣಾ ಇರಬೇಕ ನೋಡ್ರೇ."

ಶಾಂತಿಯು ಉತ್ತರಕೊಟ್ಟಳು "ನಿನ್ನ ತಲೀ, ಅಲ್ಲೇನದ, ಈಗೆಲ್ಲಾ ಸುತ್ತಾಡಿಕೊಂಡs ಇಲ್ಲೆ ಬರ್ಲಿಲ್ಲೇನು?"

ಮಧುಮತಿ "ಹಾಂಗಾರ ಅಟ್ಟಾ ಏರಿ ನೋಡೋಣ ನಡೀರಿ" ಎಂದಳು.

ಶಾಂತೆಯು ಕೇಳಿದಳು "ಫಕ್ತ ಯಾರಾರ ಬೈದರೇನು ಮಾಡ್ಬೇಕೂ?"

"ಹುಸ್ವಾ! ಅಂತ ಓಟಾ ಹಚ್ಚಿದರಾತು." ಎಂದು ಹೇಳಿದಳು ಕೃಷ್ಣಿ.

ಅಟ್ಟವನ್ನೇರಿದರು. ಎಷ್ಟು ಮೆಲ್ಲಗೆ ಹತ್ತಿದರೂ ಥಪ್ಪ-ಥಪ್ಪೆಂದು ಸಪ್ಪಳವಾಗಲೇ ತೊಡಗಿತು. ಎದುರಿನ ಕೋಣೆಯಲ್ಲಿ ನಡುವಿನ ಕುರ್ಚಿಯ ಮೇಲೆ ಹಿರಿಯವಯಸಿನವರೊಬ್ಬರು ಕುಳಿತಿದ್ದರು. ಸುತ್ತಲಿನ ಕುರ್ಚಿಯ ಮೇಲೆ ನಾಲ್ಕಾರು ಜನರು ಕುಳಿತಿದ್ದರು. ಒಬ್ಬೊಬ್ಬರು ಬಡಿಗೆ ಅಥವಾ ಚತ್ತರಿಗೆಗಳನ್ನು ಗದ್ದಕ್ಕೆ ಆನಿಸಿ-ಕೊಂಡು ಕುಳಿತಿದ್ದರು. ಈ ಕಳ್ಳಿಯರು ಮೆಲ್ಲಗೆ ದೊಡ್ಡ ಹಾಲಿನಲ್ಲಿ ಹಣಿಕಿದರು. ಸುತ್ತಲೂ ನೋಡಿದರು. "ಎಲ್ರೆ, ಎಲ್ಲಿದ ಹೆಣಾ? ಯಾಕೂ ನಮ್ಮಕ್ಕಾವರೂ ಕಾಣುಸೂದುಲ್ಲಾ—ಮಾಸ್ತರರೂ ಕಾಣ-ಸೂದುಲ್ಲಲ್ಲಾ? ಮಣ್ಣಾ ಆಗಿ ಹೋಗೇದೋ ಏನೋನವ್ವಾ?........" ಹೀಗೆಲ್ಲಾ ಹೇಳುತ್ತ ಅಟ್ಟವನ್ನಿಳಿಯಹತ್ತಿದರು. ಬೆನ್ನುಗುಂಟ ಒಬ್ಬ ಸಿಪಾಯಿಯು ಕೈಯಲ್ಲಿ ಉದ್ದವಾದ ಕಾಗದವನ್ನು ಹಿಡಿದುಕೊಂಡು ಬಂದನು.

"ಯಾಕ್ರೇ, ತಂಗೆವ್ಮಾ, ಇಲ್ಲ್ಯಾಕ್ರೇ ನೀವು? ಯಾರ ಬೇಕು ನಿಮುಗ?"

ಪೆಚ್ಚ ಕೃಷ್ಣಿಯೇ ಧೈರ್ಯಮಾಡಿದಳು "ಅಲ್ಲಪ್ಪಾ, ಇವೊತ್ತ ಯಾರೋ ಮುನಿಸೀಪಾಲಿಟಿ ಮೆಂಬರ್‍ರು ಸತ್ತಾರಂತ. ನೋಡಲಿಕ್ಕಂತ ಬಂದಿದ್ವೀ. ಅವರ ಹೆಣಾ ಈಗೆಲ್ಲಿದ?"

ಸಿಪಾಯಿ "ಇಲ್ಲಾ, ಅವರು ತಮ್ಮನೀವಳಗ ತೀರಿಕೊಂಡಾರ; ಇವೊತ್ತು ಮುನಿಸಿಪಾಲ್ಟಿಗುನೂ ಸೂಟೀ ಅದ;

ಜರೂರ ಕೆಲಸಿದ್ದ್ವಂತ ಮೂರು ನಾಲ್ಕು ಜನರು ಬಂದಾರ— ಸಂಜ್ಯಾತು ಮನೀಗೆ ಹೋಗ್ರೀ........... " ಎಂದು ಹೇಳಿದನು.

" ಅಯ್ಯ, ನಮ್ಮ ಹಣೇ ಬರಹಾನ— ನಡೀರೆವ್ವಾ, ಸುಮ್ಮನ ಇಷ್ಟು ದೂರ ಬಂದ್ವಿ " ಎನ್ನುತ್ತ ಹೊರಟರು; ದಾರಿಯಲ್ಲಿ ಮಧುಮತಿಯೆಂದಳು " ಹಾ, ಹಾ, ನಾವು ಹ್ಯಾಂಗ ಸಾಲಿಗೆ ಹೋಗ್ತೇವಿ ನೋಡು ಹಾಂಗ ಈ ಮುನಿಸೀಪಾಲಿಟೀ ಅಂದ್ರ, ಮೆಂಬರ‍್ರ ಜನರದೆಲ್ಲಾ ಸಾಲೀನ ನೋಡು. "

ಶಾಂತೆಯೆಂದಳು, " ಹೌದು ನೋಡವ್ವಾ, ನೀ ಹೇಳಿದ್ದು ಖರೇ. ಹ್ಯಾಂಗ ನಮ್ಮ ಸಾಲ್ಯಾಗ ಎಲ್ಲಾ ಅಕ್ಕವರದಶಿಂದ ಒಂದು ಚೀಲದ ತುಂಬ ರೂಪಾಯಿ ಬರ‍್ತಾವ ನೋಡು, ಒಂದನೇ ತಾರೀಖಿಗೆ, ಹಾಂಗ ಈ ಮೆಂಬರರದಲ್ಲಾ ಇವೊತ್ತು ಪಗಾರ ಬಂದಿರಬೇಕು."

ಕೃಷ್ಣಿಯೆಂದಳು "ಇರ‍್ಲಿ ನಡಿರೇ ಸವ್ಮವ್ವಾ, ಹೊಟ್ಟಿ ಭಾಳ ಹಸದದ. ಸಂಜಿಬ್ಯಾರೆ ಆಗೇದ, ಅವ್ವಾ ಏನ ಅನ್ನಾ ಹಾಕತಾಳೋ ಏನ ಕಡಬು ಕೊಡತಾಳೊ ನಾಲ್ಕು........... ? "

ಮೂವರೂ ಓಟ ಬಿಟ್ಟರು !

———————

# ನೀಲೆಯ ಸಂಸಾರ

" ನೀಲೀ, ನಿನ್ನನ್ನ ಈಗ ನಾನು ಊರಿಗೆ ಕರೆಕಳಿಸಿದ್ದು ಯಾತಕಂತ ಗೊತ್ತೈತೇನು ? "

" ಇಲ್ಲಪ್ಪಾ, ಗೊತ್ತಿಲ್ಲಾ ........ "

" ಆಹಹಹಹs ............ ಶಾರದೂರಾಗಿದ್ವ ಕ್ಯಾರ, ನೀನೂ ಸೋಗ ಮಾಡಾಕ ಬಾಳ ಕಲ್ತೀ ಬಾ—ಹೊಯ್ಯಾಲೀ ! "

ನೀಲೆಯ ಕಣ್ತುಂಬಿ ನೀರು ಹರಿಯಹತ್ತಿತು.

" ಅಪ್ಪಾ, ಸುಮ್ಮಸುಮ್ಮನ ಬೈಲಿಕ್ಕೆ ನಾನೇನು ಅಂಥಾದ್ದು ಮಾಡಿದ್ದು ? ನನ್ನ ತಪ್ಪಾದ್ರೂ ಮೊದಲು ನನ್ನ ಉಡೀ ಒಳಗ ಬೀಳಲಿ, ಆಮೇಲಿ ಸಿಟ್ಟಾಗಿರಂತ ? "

" ನೋಡ್ನೋಡ............ ಇದಕs ನೋಡ ನಿನಗ ಸೋಗಲಾಡಿ ಅನ್ನೂದು ? ಹೌದಲ್ಲ, ಮನ್ನೆ ನಿಮ್ಮ ಸಾಲೀ ಒಳಗ ಒಂದ ನಾಟಕಾ ಮಾಡಿಸಿದ್ರಂತಲ್ಲಾ ನಿಮ್ಮ ಆಕ್ಕಾನೋರು ? ಅದರಾಗ ನಿನ್ನ ಸೋಗ ಬಲು ಚೆಂದಾತಂತಲ್ಲಾ............ "

ನೀಲೆಗೆ ದುಃಖವು ಒತ್ತರಿಸಿತು. ತನ್ನ ತಂದೆ ಪತಕ್ಕಾಗಿ ಈ ತರದ ಬಿರುಸು ನುಡಿಗಳನ್ನಾಡುತ್ತಿರಬಹುದೆಂದವಳಿಗೆ ತಿಳಿಯದೇಹೋಯಿತು. ಚಟ್ಟನೆದ್ದು ಒಳಗೆ ಹೋಗಿಬಿಟ್ಟಳು. ತಂದೆಯೋ, ಕಚ್ಚಾದ ಸಾಯಿಯ ಕ್ರಮವನ್ನು ನಡೆಯಿಸಿಬಿಟ್ಟದ್ದನು.

ಲೀಲಾವತಿಯು ತೇಗೂರ ಗೌಡರ ಮಗಳು. ತೇಗೂರ ಗೌಡರೆಂದರೆ ಆ ಊರಿಗೆ ರಾಜರಿದ್ದಂತೆಯೇ. ಒಕ್ಕಲಿಗರೇ ಅವರ ಸೇನಾಪತಿಗಳು. ದನ-ಕರುಗಳೇ ಅವರ ಆನೆಕುದುರೆಗಳ ಸೈನ್ಯ. ತೋಟ-ಹೊಲ-ಯಾತದ ಬಾವಿ, ಇವೇ ಅವರಿಗೆ ರಣಾಂಗಣ. ಇಲ್ಲಿಯೇ ಅವರ ಜೀವನದ ಹೋರಾಟ.

ಗೌಡರ ಮನೆತನವು ಬಲು ಪುರಾತನ ಕಾಲದಿಂದ ಗೌರವವನ್ನು ಪಡೆಯುತ್ತ ಬಂದದ್ದು. ಮನೆಯ ಜನರೆಲ್ಲರೂ ತೀರ ಹಳೆಯ ಸಂಪ್ರದಾಯದವರು. ಜಾತಿಯಿಂದ ಲಿಂಗವಂತರು. ಮನೆಯೊಳಗಿನ ಹೆಣ್ಣುಮಕ್ಕಳು ತಮ್ಮ ತಮ್ಮ ಮನೆಗೆಲಸಗಳನ್ನು ಅಚ್ಚುಕಟ್ಟು-ತನದಿಂದ ಮಾಡುತ್ತ, ಆಳುಮಕ್ಕಳ ಹೊಟ್ಟೆ-ನೆತ್ತಿಗಳನ್ನು ಮಕ್ಕಳಂತೆ ನೋಡುತ್ತ, ಅವರಿಂದ ಮೈತುಂಬ ಕೆಲಸಬೊಗಸೆಗಳನ್ನು ಮಾಡಿಸುತ್ತ, ಉಟ್ಟುತೊಟ್ಟು, ಉಂಡು-ತಿಂದು ಮನೆಯಲ್ಲಿ ಶೃಂಗಾರವಾಗಿ ಸುಖದಿಂದಿರಬೇಕೆಂಬುದೇ ಎಲ್ಲರ ಅಭಿಮತ. ಮಡ್ಡಮ್ಮಸಾಹೇಬರ ಹಾಗೆ ಅವರು ಶಾಲೆ-ಕಾಲೇಜುಗಳಿಗೆ ಹೋಗಕೂಡದು—ಸಭೆಗಳ ಸುದ್ದಿಯನ್ನಂತೂ ಕಿವಿಯಿಂದ ಸಹ ಕೇಳಬಾರದು. ನಿಬ್ಬಣ-ಜಾತ್ರೆಗಳ, ಗುಡಿಗುಂಡಾರಗಳ, ಹೊಲದ ರಾಶಿಯ ದಿನದ ಹೊರತಾಗಿ ಅವರು ಇನ್ನೆಲ್ಲಿಯೂ ಎಂದೆಂದಿಗೂ ಮನೆಬಿಟ್ಟು ಹೊರಬೀಳಕೂಡದು! ಅಂಥದರಲ್ಲಿ ಏನೋ ಅಪ್ಪಿತಪ್ಪಿ ಗೌಡರ ಮಗಳ ಹೆಸರನ್ನು ಯಾರೋ ' ಲೀಲಾ ' ಎಂದಿಟ್ಟಿದ್ದರು. ಆದರೆ ಗೌಡರ ಮನಸಿಗೆ ಅದು ಸಹ ಬಾರದ್ದರಿಂದ ಅವರು ನೀಲೆಯೆಂತಲೇ ಕರೆಯುತ್ತಿದ್ದರು.

ಗೌಡರ ತಂಗಿಯೊಬ್ಬಳನ್ನು ಪೇಟೆಯವರಿಗೆ ಮದುವೆಮಾಡಿ-ಕೊಟ್ಟಿದ್ದರು. ಒಕ್ಕಲಿಗರ ದೃಷ್ಟಿಗನುಸರಿಸಿ ಅವಳ ಹೆಸರೂ ಸುಧಾರಿ-ಸಿದ್ದು—ಪದ್ಮಾ. ಆದರೆ ಹಳ್ಳಿಯಲ್ಲಿ ಅವಳು ಪದುಮವ್ವ. ಅವಳ ಗಂಡ ವಕೀಲ. ಮಾಳಮಡ್ಡಿಯಲ್ಲಿ ತಮ್ಮ ಸ್ವಂತದ ಬಂಗಲೆಯಲ್ಲಿ, ತಾಕು ಠೀವಿಯಿಂದ ಇಪ್ಪತ್ತು ವರುಷದ ಶಂಕರನೊಂದಿಗೆ ಸುಖವಾಗಿದ್ದರು. ತಂಗಿಯ ಆಗ್ರಹದ ಮೂಲಕ ಗೌಡರು ತಮ್ಮ ನೀಲಿಯನ್ನವಳಲ್ಲಿ ತಂದು ಚಿಕ್ಕಂದಿನಲ್ಲಿಯೇ ಬಿಟ್ಟು ಹೋಗಿದ್ದರು. ಅವಳಿಗೀಗ ಹದಿನಾಲ್ಕು ನಡೆದಿತ್ತು; ಮನೆಯಲ್ಲಿ ಸೋದರತ್ತೆ-ಮಾವಂದಿರ ಅಕ್ಕರೆಯಿಂದ ಯಾವುದಕ್ಕೂ ಕೊರತೆಯಾಗದೆ ಸುಖವಾಗಿ ಬೆಳೆದಿದ್ದಳು; ಜೊತೆಗೆ ಶಂಕರನಂತಹ ಸುಗುಣಿ ಮಾವನು. ಅವಳು ಈ

ಅವಧಿಯಲ್ಲಿ ಟ್ರೇನಿಂಗ ಕಾಲೇಜಿನಲ್ಲಿ ಮೂರನೆಯ ವರುಷವನ್ನು ಮುಗಿಸಿ, ಮನೆಯಲ್ಲಿ ಇಂಗ್ಲೀಷು ಸಹ ಓದಿಕೊಂಡು, ಶಂಕರನ ಸಹಾಯದಿಂದ ಜಾಣಳಾಗಿ, A. V. School ನಲ್ಲಿ ಇಂಗ್ಲೀಷು ನಾಲ್ಕನೆಯ ಇಯತ್ತೆಯ ಸರ್ಟಿಫಿಕೇಟನ್ನು ಪಡೆದಿದ್ದಳು.

ವಿದ್ಯೆಗೆ ಭೂಷಣ ತರುವಂತಹ ವಿನಯವೂ ಲೀಲೆಯಲ್ಲಿತ್ತು. ಶಾಲೆಯ ಅಭ್ಯಾಸ ಮಾಡಿಕೊಂಡು ಮಿಕ್ಕ ವೇಳೆಯಲ್ಲಿ ಹಾರ್ಮೋನಿಯಂ ಕಲಿಯುವದು, ಇನ್ನುಳಿದ ವೇಳೆಯಲ್ಲಿ ಸೋದರತ್ತೆಗೆ ನೆರವಾಗುವದು- ಇದು ಅವಳ ನಿತ್ಯಕ್ರಮ. ಅತ್ತೆಯು ಅವಳ ಗುಣಕ್ಕೆ ಮೆಚ್ಚಿದ್ದಳು. ದಿನಾಲು ಅವಳಗೊಂದೊಂದು ಬಗೆಯ ಹೆಳಲು ಹಾಕಿ, ಬಗೆಬಗೆಯ ಬಣ್ಣದ ಪತ್ತಲಗಳನ್ನು ಉಡಿಸುವಳು. ಶಂಕರನು ಖಾದೀಭಕ್ತ-ನಿದ್ದನೆಂದು, ಅವಳೂ ಖಾದಿಯ ಸುಂದರವಾದ ಪತ್ತಲಗಳನ್ನೇ ಉಡುತ್ತಿದ್ದಳು. ಸೋದರಮಾವನಂತೂ, ಅವಳೇನು ಈಗಾಗಲೇ ತನ್ನ ಶಂಕರನ ಹೆಂಡತಿಯಾಗಿ ಬಿಟ್ಟಳೋ ಏನೋ ಎಂದು ತಿಳಿದು ಹಿರಿಹಿರಿ ಹಿಗ್ಗುವನು. ಪತಿಪತ್ನಿಯರಿಬ್ಬರೂ ಒಂದೆರಡು ಬಾರಿ ಅವಳಿಗೆ ಹೀಗೆ ನಗೆಯಾಡಿದ್ದರು ಸಹ.

ಈ ತಿಂಗಳೊಪ್ಪತ್ತಿನಲ್ಲಿಯಂತೂ ವಕೀಲರು ಸಂಜೆಗೆ ಮನೆಗೆ ಮರಳುವಾಗ ಬರಿಗೈಯಿಂದ ಎಂದಿಗೂ ಬರುತ್ತಿದ್ದಿಲ್ಲ. ಸೋದರ-ಸೊಸೆಗೆ ಒಂದಿಲ್ಲೊಂದು ಇನಾಮು ದಿನಾಲು ಇದ್ದುದೇ. ಜರದ ಸೀರೆ, ಬ್ಲಾವುಜಪೀಸು, ಲಾಯಿನ ಬಝಾರ ಪೇಢೇ, ಸುಕಾ ಅಂಜೀರು, ಕಾಗದೀ ಬದಾಮು, ಇಂಪೀರಿಯಲ್ ಕ್ಯಾಫೆ ಬಿಸ್ಕೀಟು, ಆಯಾ ದಿನಮಾನಗಳಿಗನುಸರಿಸಿ ಹೂವುಗಳು...........

ಇತ್ತ ಶಂಕರ ಲೀಲೆಯರೂ ಒಬ್ಬರನ್ನೊಬ್ಬರು ಪ್ರೀತಿಸು-ತ್ತಿದ್ದರು. ಹಿರಿಯರಿಬ್ಬರ ಚೇಷ್ಟೆಯಿಂದ ಅವರ ಪ್ರೀತಿಗಿನ್ನಿಷ್ಟು ಪುಟಕೊಟ್ಟಂತಾಗುತ್ತಿತ್ತು. ಇಬ್ಬರೂ ಒಬ್ಬರನ್ನೊಬ್ಬರು ನೋಡಲು ನಾಚುತ್ತಿದ್ದರು. ಒಬ್ಬರೊಡನೊಬ್ಬರು ಮಾತನಾಡುವದಂತೂ ಕಷ್ಟವೇ.

ಶಂಕರ—ಲೀಲೆಯರ ಪರೀಕ್ಷೆಗಳು ಮುಗಿದದ್ದರಿಂದಲೂ, ವಕೀಲರ ಕೋರ್ಟಿಗೆ ಸೂಟಿಯಾದುದರಿಂದಲೂ, ವಕೀಲರು ಅದೇ ಮೇ ತಿಂಗಳಲ್ಲಿ ಎಲ್ಲರಿಗೂ ಮುಂಬೈಯನ್ನು ತೋರಿಸಲಿಕ್ಕೆ ಕರೆದು-ಕೊಂಡು ಹೋಗಬೇಕೆಂದು ಮಾಡಿದ್ದರು. ಅಷ್ಟರಲ್ಲಿ ಒಂದು ದಿವಸ ಅಕಸ್ಮಾತ್ತಾಗಿ ಲೀಲೆಗೆ ತಂದೆಯಿಂದ 'ಕೂಡಲೆ ಹೊರಟು ಬಾ' ಎಂದು ಪತ್ರವೊಂದು ಬಂದಿತು. ಮರುದಿವಸ ನಸುಕು ಹರಿಯುವದ-ರೊಳಗೆ ಅವರ ಕಡೆಯ ಆಳೊಂದು ಅವರನ್ನು ಕರೆಯಲಿಕ್ಕೆಂದು ಮೂರ್ತಿಮತ್ತಾಗಿ ಬರುತ್ತಿರುವದು ಕಂಡಿತು.

ಎಲ್ಲರಿಗೂ ಸೋಜಿಗವಾಯಿತು. ಏನು ಕಾರಣ ಹೀಗೆ ಒಮ್ಮಿಂದೊಮ್ಮೆ ಮಗಳನ್ನು ಕರೆಕಳುಹಿರಬಹುದೆಂದು ಯಾರಿಗೂ ತಿಳಿಯಲಿಲ್ಲ; ತಿಳಿದುಕೊಳ್ಳಲು ಅವಕಾಶ ಕೂಡ ಉಳಿಯಲಿಲ್ಲ. ಆಳು-ಮಗನಿಗೆ ಕೇಳಲು ಸಹ ಒಬ್ಬರಿಗೂ ಧೈರ್ಯಸಾಲಲಿಲ್ಲ. ತಟ್ಟನೆ ಹೋಗಿ ಅವನು ಗೌಡರ ಮುಂದೆ ಒಂದಕ್ಕೆರಡು ಹೇಳಿಬಿಟ್ಟರೆ?........ ಗೌಡರ ಹಟಮಾರಿತನವನ್ನೆಲ್ಲರೂ ಬಲ್ಲರು. ಮುಂಬಯಿಗೆ ಹೊರಡುವ ಉಲ್ಲಾಸದಲ್ಲಿದ್ದ ಅವರೆಲ್ಲರೂ ಕಳೆಗುಂದಿದರು.

ಲೀಲೆಯು ತೇಗೂರಿಗೆ ಬಂದಳು. ಊರಿಗೆ ಬಂದ ದಿವಸ ತಂದೆಯ ಅವಳೊಡನೆ ಮಾತನ್ನೇ ಆಡಲಿಲ್ಲ— ತಾಯಿಯೂ ಅಷ್ಟಕ್ಕಷ್ಟೇ! ಮೋಟರ ಸ್ಟ್ಯಾಂಡಿನಿಂದ ಮನೆಯವರೆಗೆ ಅವಳೊಡನೆ ಆಳಿನ ತಲೆಯ ಮೇಲೆ ಬರುತ್ತಿದ್ದ ಅವಳ ಟ್ರಂಕು, ಸೂಟಕೇಸುಗಳನ್ನು ಇಡಿಯ ಊರ ಜನವೇ ದಂಗುಬಡಿದು ನೋಡುತ್ತಿತ್ತು. ಅಡಿಗೆಯ ಮನೆ-ಯಲ್ಲಿ ಹೋಗಿ ತಾಯಿಗೆ ವಂದಿಸಿದೊಡನೆಯೆ, 'ತಲಿಮ್ಯಾಗ ಸೆರಗ ಹೊರಽ ನೂಳಾ' ಎಂಬ ಆಶೀರ್ವಾದವಾಯಿತು.

ಮರುದಿವಸ ಗಚ್ಚೀಧಡಿಯ ಸೀರೆಗಳು ಅವಳನ್ನಲಂಕರಿದವು.

"ನಾಲ್ಕು ದಿವಸ ನಾನಿಲ್ಲಿರುವವಳು ಸುಮ್ಮನೆ ಎಲ್ಲರ ಮನಸಿನ ವಿರುದ್ಧವಾಗಿದ್ದು ಅವರ ಮನಸ್ಸನ್ನೇಕೆ ನೋಯಿಸುವದು! ಹಳ್ಳಿಯ

ಊರು—ಅದರಂತೆಯೇ ನಡೆದರಾಯಿತು." ಎಂದುಕೊಂಡು ಸುಮ್ಮ-ನಾದಳು. ಅದೇ ದಿನ ಮಧ್ಯಾಹ್ನಕ್ಕೆ ತಂದೆ ಮಗಳ ತುದಿಮೊದಲಿಲ್ಲದ ಸಂವಾದವಾದದ್ದು.

ಸಾಯಂಕಾಲಕ್ಕೆ ತಂದೆಯೊಡನೆ ಊಟಕ್ಕೆ ಕುಳಿತಿದ್ದಳು. "ನೀಲಾ........" ಮುದುಕನ ಕಂಠವು ಬಿಗಿಯಿತು.

"ಮಧ್ಯಾಹ್ನದಲ್ಲಿ ನೀಲಿ, ನೀಲಿಯೆಂದು ಆರ್ಭಟಿಸಿದನೇನು, ಈಗ ಒಮ್ಮೆಲೆ ದುಃಖಿಸುವನೇನು? ಇದರ ರಹಸ್ಯವಾದರೂ ಏನಿರ-ಬಹುದು?" ಎಂದು ದಿಗಿಲುಗೊಂಡ ನೀಲೆಯು ಸುಮ್ಮನೆ ತಂದೆಯು ಕಡೆಗೆ ಮುಖವೆತ್ತಿದಳು.

"ನೀಲಾ, ನೀ ನಾನ್ನ ಮನೀ ಮರ್ಯಾದಿನ ಕಳದಿ—ಅದು ನಿನ್ನ ತಪ್ಪಲ್ಲಾ-ಪ್ಯಾಟಿ ಊರಾಗ ಒಯ್ದು ನಿನ್ನ ಕಲ್ಯಾಕಿಟ್ಟದ್ದs ಮದ್ಲ ನನ್ನ ತಪ್ಪು. ಅಲ್ಲೇ ನೀ ಎಟ್ಟದು ದಾಂದಲೇ ಹಾಕೂದು? ಮ್ಯಾಗಿಂದ ಮ್ಯಾಗ ಅವರೆಲ್ಲಾರ ಸಂಗಾಟ ಶಿನೇಮಾಕ್ಕೇನ ಹೋಕ್ಕಿ-ದ್ದೆಂತ, ಗಂಡರಾಮ್ಯಾರ ಹಾಂಗ ನಿಮ್ಮತ್ತೀ-ಮಾವಾ ಅವರ ಹಂತೇಕ ಕುರ್ಚೆದಮ್ಯಾಗ ಕುಂಡರತಿದ್ದೇನ, ಪ್ಯಾಟಿ ಪ್ಯಾಟಿ ಆ ಶಂಕರ್ಯಾನ ಸಂಗಾಟ ತಿರಗೂದೇನ, ಗುಜ್ಜರ ಹಾಂಗ ಪತ್ಲಾ ಏನ ಉಡೂದು—ಅವು ಸಂಕಾ ಕಾದೀವs ಪತ್ಲಾ? ನೀ ಕಾದೀ ಉಟಗೊಂಡಕ್ಯಾರಾ ನಿಮ್ಮನೀ ಗೌಡಕೀ ಕಳೀಬೇಕಂತ ಮಾಡೀದ್ಯಾ? ಸರಕಾರ ಮುಂದ ಸಂಕಾ ಬೆದರದ ದರಪಾ ಕಾಯ್ಕೊಂಡ ಹ್ವಾದ ನಮ್ಮೆಲ್ಲಾರ್ನ ಅವರ ದರಬಾರದಾಗ ಕಾಲಿಡದ್ಹಾಂಗ ಮಾಡಬೇಕಂತಿಯಾ ಮೂಳಿ?........ ಸಾಕ, ಸಾಕ—ನಿನ್ನ ಸಾಲೀ ಪಾಲೀ ಸಾಕಿನ್ನ—ತಣ್ಣಗ ಮೂಲ್ಯಾಗ ಕುಂಡ್ರು. ನಿನ್ನ ಹೀಂಗ ಬಿಟ್ರ, ಯಾವ ಗೌಡ್ರ ಮಗಾನೂ ನಿನಗ ಮಾಡಿಕೊಳ್ಳಾಕ ಒಪ್ಪಾಕಿಲ್ಲಾ. ಪದಮವ್ವನ ಮನ್ಯಾಗ ನಿನಗ ಹ್ಯಾಂಗ್ಯಾಂಗ ರೀತೀ ಮಾಡಿ ಕುಣಿಸ್ಯಾರಂತ ನನಗೆಲ್ಲಾ ಗೊಂತೈತಿ; ಪ್ಯಾಟೀ ಊರಿಗೆ ನಾರಾವಾರಾ ಹೋಗಿಬರೂ ನನ್ನ ರೈತರು ನನಗೆಲ್ಲಾ

ಹೇಳ್ಯಾರು ನಿನ್ನ ಕತೀಸ! ಇನ್ನೊಂದ ನಾಕೈದ್ದಿನಕ, ಕ್ಯಾರಕೊಪ್ಪದ ಗೌಡ್ರು ನಿನ್ನ ನೋಡಾಕ ಬರ್‍ತಾರ—ಹೊಂದಿಸಿಕ್ಯಾರಾ ಇದs ತಿಂಗಳ-ದಾಗ ಕಾರ್ಯೇವ ಮಾಡಿಬಿಡ್ತೇನಿ. ಅವರು ಬರೂ ದಿನಾ ಅರ ಅಟ ನಿನ್ನ ವಾರಿ ಜೇತೇಲೀ ಬಿಟ್ಟು ನಡಕ ತಗದು ಜಡೀ ಹಾಕ್ಕೋ—ಆ ಕೈಯಾನ ಬಿಲ್ಲಾದವರಾ ತಗದು ಬಂಗಾರ ಬಳೀ ಹಾಕು!!"

ತಂದೆ ಹೇಳಿದ ಹಾಗೆ ರೂಪದ ವಿದ್ರೂಪವನ್ನು ಬೇಕಾದಷ್ಟು ಮಾಡಲು ಅವಳು ಸಿದ್ಧಳಿದ್ದಳು. ಆದರೆ 'ನೋಡಲಿಕ್ಕೆ ಬರುವ ಗೌಡರ ಮಗನೊಡನೆ ತನ್ನ ಮದುವೆ'ಯ ಮಾತನ್ನು ಕೇಳಿದೊಡನೆ ಅವಳ ಅಂತಃಕರಣಕ್ಕೆ ಬಹಳ ನೋವಾಯಿತು; ಮನಸು ಚದರಿ ಚಲ್ಲಾ-ಪಿಲ್ಲಿಯಾಯಿತು.

ರಾತ್ರಿ ಕೋಣೆಯಲ್ಲಿ ಒಬ್ಬಳೇ ಕುಳಿತಿದ್ದಳು. ಮನೆಯ ಜನರೆಲ್ಲರೂ ನಿದ್ರೆಹೋಗಿದ್ದರು. ವಕೀಲರಲ್ಲಿದ್ದಾಗ ತೆಗೆಸಿದ ಗ್ರೂಪ್ ಫೋಟೋದಲ್ಲಿ ತನ್ನನ್ನು ನೋಡಿಕೊಂಡಳು. ಅವಳ ಗುರುತು ಅವಳಿಗೇ ಹತ್ತದಂತಾಗಿ, ಹುಚ್ಚೆದ್ದು ಹೋದಳು. ಈಗಾಗಲೆ ಕ್ಯಾರಕೊಪ್ಪದ ಗೌಡರ ಮಗನೊಡನೆ ತನ್ನ ವಿವಾಹವಾಗಿ ಹೋಗಿ-ದೆಯೋ ಏನೋ ಎನ್ನಿಸುವಷ್ಟು ಗಾಬರಿಯಾದಳು.

ಒಂದು ದಿನ ಅವಳ ಸೋದರತ್ತೆ "ಲೀಲಾವತಿ, ನಿನ್ನ ಗಂಡಗ ಸ್ನಾನಕ್ಕ ನೀರು ತೋಡು, ನಾ ಇಬ್ಬರಿಗೂ ಊಟಕ್ಕ ಹಾಕ್ತೇನಿ. ಹೈಸ್ಕೂಲಿಗೆ ಹೊತ್ತಾಗೇದಂತ ಅವಸರಾ ಮಾಡ್ಲಿಕ್ಹತ್ಯಾನ........" ಎಂದಿದ್ದಳು.

ಅಂದಿನಿಂದ, ಲೀಲೆಯು ಎಷ್ಟೆಷ್ಟು ರಟ್ಟಿನ ಮೇಲೆ ಕಸೂತಿ-ಗಳನ್ನು ತೆಗೆದಿದ್ದಳೋ, ಜೀಗಿನ ಮೇಲೆ- ಕ್ಯಾನವಸದ ಮೇಲೆ ನಕ್ಷೆ-ಗಳನ್ನು ತೆಗೆದಿದ್ದಳೋ, ಅದೆಷ್ಟು ಬಗೆಯ ವಸ್ತ್ರಗಳನ್ನೂ, ಟೇಬಲ ಕ್ಲಾಥು-ಪರ್ಸುಗಳನ್ನೂ ಹೆಣೆದಿದ್ದಳೋ, ಅವೆಲ್ಲವಕ್ಕೂ ಹೆಸರು ಹಾಕಬೇಕಾದರೆ ತನ್ನ ಹೆಸರು, ಶಂಕರನ ಹೆಸರು, ಅವನ

ಅಡ್ಡಹೆಸರುಗಳನ್ನು ಆಗಲೇ ಹಾಕಿಟ್ಟಿದ್ದಳು. "ಕಟ್ಟು—ಕನ್ನಡಿ ಹಾಕಿಸೋಣ ತಾ" ಎಂದು ಅವರ ಮಾವ ಕೇಳಿದಾಗ ಕೊಟ್ಟಿರಲಿಲ್ಲ. ನಿಜವಾದ ಕಾರಣವನ್ನು ಮಗನಿಂದ ತಿಳಿದುಕೊಂಡಾಗ ವಕೀಲರು "ಆಗಲಿ, ಅವಳ ಮನಸಿನಂತಾದ ಮೇಲೆಯೇ ಅವಕ್ಕೆ ಕನ್ನಡಿ ಹಾಕಿಸೋಣ" ಎಂದುಕೊಂಡು ಸುಮ್ಮನಾದರು.

ಅವೆಲ್ಲ ವಸ್ತುಗಳನ್ನು ನೋಡಿದೊಡನೆ ಅವಳಿಗೆ ಸಂಕಟವಾಯಿತು. ಹಿಂದಿನ ಮಾತುಗಳೆಲ್ಲ ನೆನಪಾಗಿ ಮೈ ಜುಮ್ಮೆಂದಿತು. ಸೋದರತ್ತೆ ಮಾವ ಹಾಗು ಶಂಕರಮಾಮಾ ಇವರ ಜತೆಯು—ಆ ಸ್ವರ್ಗಸುಖವು —ಹಿಂದಿನ ಜನ್ಮದಲ್ಲಿ ಸಿಕ್ಕಿತ್ತೋ ಏನೋ............ ಇಂದಿನಿಂದ ಇನ್ನೊಂದು ಜನ್ಮಕ್ಕೆ ಪ್ರಾರಂಭವಾಯಿತೋ ಏನೋ ಎಂದೆನಿಸಿ ಹೋಯಿತು ಲೀಲೆಗೆ.

ಕೂಡಲೆ, ಸರಿರಾತ್ರಿಯಾಗಿದ್ದರೂ ನಿದ್ರೆ ಹೋಗದೆ, ತಟ್ಟನೆ ಶಂಕರಮಾಮಾನ ಹೆಸರಿಲೆ ಒಂದು ಪತ್ರವನ್ನು ಬರೆದಳು. ತನ್ನನ್ನು ತೇಗೂರಿನ ವಾಸದಿಂದ ಬೇಗ ತಪ್ಪಿಸಬೇಕೆಂದು ಬಲವಂತ ಮಾಡಿದ್ದಳು. ತನ್ನ ಬಂಧವಿಮೋಚನೆಗಾಗಿ ಸೆರಗೊಡ್ಡಿ ಮೂವರಿಗೂ ಬೇಡಿಕೊಂಡಿದ್ದಳು......... ಆದರೆ ಅಂಚೆಪೆಟ್ಟಿಗೆಯಲ್ಲಿ ಒಗೆಯುವ ಬಗೆ ಹೇಗೆ............?

ಮರುದಿನವೇ ಮಾವನಿಂದ ಪತ್ರ ಬಂದಿತು; ಮುಂಬಯಿಗೆ ಹೊರಡಲಿಕ್ಕೆ ಕೂಡಲೇ ಬರಬೇಕೆಂದು.

ಆದರೆ ಇವಳ ತಂದೆ ಅದರ ಗಂಧವು ಕೂಡ ಇವಳಿಗೆ ಹತ್ತದಷ್ಟು ಜಾಗರೂಕತೆಯಿಂದ ಹೊರಗಿನಿಂದ ಹೊರಗೆಯೇ ಆ ಪತ್ರಕ್ಕೆ "ಅವಳಿನ್ನೂ ಎರಡು ತಿಂಗಳು ಈ ಊರು ಬಿಡಲಿಚ್ಛಿಸುವದಿಲ್ಲ"ವೆಂದು ಪತ್ರ ಬರೆಯಿಸಿಬಿಟ್ಟನು.

ಲೀಲೆ ಬರಲಿಲ್ಲವೆಂದು ಅಸಮಾಧಾನಪಟ್ಟು ಪದ್ಮಾಬಾಯಿಯು ಮುಂಬಯಿಗೆ ಹೋಗಲಿಲ್ಲ. ಪತ್ರದ ಉತ್ತರವನ್ನೋದಿಕೊಂಡು

ಆ ತಂದೆಮಕ್ಕಳಿಬ್ಬರೂ ನಿರ್ವಾಹವಿಲ್ಲದೆ ಮುಂಬಯಿಯ ಕಡೆಗೆ ಹೊರಟುಹೋದರು.

ಇತ್ತ ಕ್ಯಾರಕೊಪ್ಪದ ಗೌಡರ ಮಗ ಶಿದ್ಲಿಂಗಗೌಡನೊಡನೆ ನಿಶ್ಚಯವಾಯಿತು. ಬೇಕಾದಷ್ಟು ಬೋರಾಡಿದಳು, ಆದರೂ ಅವಳ ಸುತ್ತುಮುತ್ತಲಿನ ನರರಾಕ್ಷಸರಲ್ಲಿ ಒಬ್ಬನಿಗೂ ದಯಬರಲಿಲ್ಲ. ನಿಶ್ಚಯದ ದಿವಸ ಇಬ್ಬರು ಮದುಮಕ್ಕಳನ್ನು ಬಾಜೆ-ಬಜಾವಣೆ-ಗಳೊಂದಿಗೆ ಮೆರೆಯಿಸುತ್ತ, ಊರಮುಂದಿನ ಶಂಕರಲಿಂಗನ ದೇವಾಲಯಕ್ಕೆಂದು ನಿಬ್ಬಣ ಹೊರಡಿಸಿದರು. ಎತ್ತಿನ ಬಂಡೆಯ ಮೇಲೆ ಅಡ್ಡವಾಗಿ ತೂಗುಮಂಚವನ್ನು ಕಟ್ಟಿ, ಅದರ ಮೇಲೆ ಹಾಸಿ ಅವರಿಬ್ಬರನ್ನು ಸಿಂಗರಿಸಿ ಕುಳ್ಳಿರಿಸಿದ್ದರು.

ಅರ್ಧದಾರಿಗೆ ಮೆರವಣಿಗೆಯು ಬರುತ್ತಿರುವಾಗ ಲೀಲೆಗೆ ಬಿಕ್ಕು ಹೆಚ್ಚಾಗಿ ಓಕರಿಕೆಗಳು ಬರಹತ್ತಿದವು; ಅಳುವು ಒಂದೇ ಸವನೆ ನಡೆದಿತ್ತು; ಇನ್ನಿಷ್ಟು ಮುಂದಕ್ಕೆ ಹೋಗುತ್ತಿರುವಷ್ಟರಲ್ಲಿ ಎಲ್ಲಿ ವಾಂತಿಯಾಗುವದೋ ಎಂದವಳೇ ಸಾಹಸಬಟ್ಟು ಟಣ್ಣನೆ ಕೆಳಗೆ ಜಗಿದಳು. ಕಲಿತ ಹೆಂಡತಿ ಸಿಕ್ಕಳೆಂಬ ಉಬ್ಬಿನಿಂದ ಬಳಿಯಲ್ಲಿಯೇ ಕುಳಿತ ಬಲಿತ ಕೋಣನು ಗಾಬರಿಯಾಗಿ ಎಲ್ಲರಿಗೂ "ನಿಲ್ಲಿರಿ, ನಿಲ್ಲಿರಿ" ಎಂದು ಕೂಗಿದನು. ಲೀಲಾವತಿಯು ಅಲ್ಲಿಯೇ ಒಂದು ಮಗ್ಗಲಿಗೆ ಹೋಗಿ ಬೊಟ್ಟು ಹಾಕಿ ವಾಂತಿಮಾಡಿಕೊಂಡಳು. "ಭಾಳ ಆಯಾಸ ಪಟ್ಟಗೊಂಡಾಳ—ಇಂದಿನ ಹೋಳಿಗಿ ಈಕೀಗೆ ದಕ್ಕಿಲ್ಲಾ" ಎಂದು ಜನರು ಆಡಿಕೊಂಡರು. 'ನೀರು—ನೀರು' ಎಂದು ಕೂಗಿ ಬಾಯಿಬಿಟ್ಟಳು; 'ಕಣ್ಣಿಗೆ ಕತ್ತಲೆ ಬರುವದು' ಎಂದು ಜೋಲಿ ಹೊಡೆಯುತ್ತ, ಸೆರಗು ಸಾವರಿಸುತ್ತ, ಎದುರಿಗಿದ್ದ ಟಪಾಲುಪೆಟ್ಟಿಗೆಗೆ ಧಡಕ್ಕನೆ ಹಾಯ್ದವಳೇ ಬಿದ್ದು ಬಿಟ್ಟಳು................

ಹೇಗಾದರೂ ಚೇತನಗೊಂಡವಳು ಎದ್ದಳು. ಒಮ್ಮೆ ಮೆರ-ವಣಿಗೆ ತೀರಿಸಿಕೊಂಡು ಮನೆಗೆ ಬಂದರು. ಇನ್ನೆರಡೇ ದಿನಕ್ಕೆ ಮದುವೆ

ಇದ್ದಿತು. ಆಗ ಗೌಡರು ಮಗಳ ಬಾಯಿಯಿಂದ ಸಿಟ್ಟಿನ ಭರದಲ್ಲಿ ಒಮ್ಮೆ "ಆದರೆ ನಾನು ಶಂಕರಮಾವನನ್ನೇ ಮದುವೆಯಾಗುವೆನು" ಎಂದು ನಿಷ್ಠುರವಾಗಿ ಅಂದದ್ದನ್ನು ಕೇಳಿದ್ದರು. ಅದು ಅವರ ನೆನಪಿನಲ್ಲಿತ್ತು. ಅಂತೆಯೇ ತನ್ನ ತಂಗಿ ಪದುಮವ್ವನ ಮನೆಯುಲ್ಲಿ ಯಾರನ್ನೂ ಮದುವೆಗೆ ಕರೆಕಳುಹಿರಲಿಲ್ಲ— ಅವರೆಲ್ಲಿಯಾದರೂ ಅಡ್ಡಿ-ಯಾಗಬಹುದೆಂದು.

ಇತ್ತ ಮದುವೆಯ ದಿವಸ ಮಧ್ಯಾಹ್ನಕ್ಕೆನೇ ಪದ್ಮಾಬಾಯಿಯ ಕೈಯ್ಯಲ್ಲಿ ಲೀಲಾವತಿಯ ಎರಡು ಪತ್ರಗಳು ಬಂದು ಬಿದ್ದವು. ಡ್ರಾಯಿಂಗ ತೆಗೆಯುವ ಕೆಂಪು ಖಡುವಿನಿಂದ ಬರೆದಿದ್ದಳು. ಒಂದು ಲೀಲೆ ತೇಗೂರಿಗೆ ಹೋದ ಮರುದಿನವೇ ಬರೆದದ್ದು; ಇನ್ನೊಂದು ನಿಶ್ಚಯದ ದಿವಸ ಬರೆದದ್ದು. ಓದಿಕೊಂಡಳು. ಹೊಟ್ಟೆಯಲ್ಲಿ ಪಂಜು ಹಚ್ಚಿದಂತಾಯಿತು.

ಅವಳಾದರೂ ಏನು ಮಾಡಬೇಕು? ಗಂಡನೂ ಮಗನೂ ಎರಡು ದಿನದ ದಾರಿಯ ಆಚೆಗೆ. ಅದು ಕೂಡ ಪತ್ರ-ತಾರು ವೇಳೆಗೆ ಮುಟ್ಟುವಂತಿಲ್ಲ. ನಿಧಾನವಾಗಿ ಈ ಬಗ್ಗೆ ವಿಚಾರಮಾಡಲು ಸಹ ಆವಳಿಗೆ ಸಾಕಷ್ಟು ವೇಳೆಯಿರಲಿಲ್ಲ. ಹಿಂದುಮುಂದಿನ ವಿಚಾರ ಮಾಡದೆ, ತಟ್ಟನೆದ್ದು ಬಾಗಿಲುಗಳನ್ನು ಇಕ್ಕಿ ಕೀಲಿಹಾಕಿ, ಆಳಿನೊಡನೆ ಟಾಂಗಾ ಮಾಡಿಕೊಂಡು ಮೋಟಾರಸ್ಟ್ಯಾಂಡಿಗೆ ಹೊರಟೇ ಬಿಟ್ಟಳು; ಬಸ್ಸೂ ಸಿದ್ಧವಾಗಿತ್ತು; ಒಂದು ಗಂಟೆಯಲ್ಲಿ ತೇಗೂರಿಗೆ ಬಂದು ಮುಟ್ಟಿದಳು.

ಖುಸ್-ಖುಸ್ಸೆಂದು ಮುಸುಕಿನಲ್ಲಿಯೇ ಬಿಕ್ಕುತ್ತ ಹಸೆಮಣೆಯ ಮೇಲೆ ಒಬ್ಬ ಕಡ್ಡೀಪುಡಿ ಕೆಂಚನೊಡನೆ ಕುಳಿತ ತನ್ನ ಲೀಲೆಯನ್ನು ಕಂಡಳು. ಉಬ್ಬಸಬಡುತ್ತ "ಅಯ್ಯೋ ಲೀಲಾ"....ಎಂದಳು.

"ಹಾ, ಅತ್ತೆವ್ವಾs........" ರಂಬಾಟವಾಯಿತು. ಇದನ್ನೆಲ್ಲ ಕೇಳಿ, ನೆರೆಮನೆಯ ತಿಪ್ಪಾಭಟ್ಟರು ಬಂದು, "ಗೌಡ್ರು— ಇಂಥಾ

ಕೆಲ್ಸಾ ಮಾಡಬಾರ್ದಿತ್ತು. ನೀವು, ಇಷ್ಟು ಜುಕ್ಕಾನ್ ಜುಲಮಿಾಲಿ ಮಗಳ ಲಗ್ನ ಮಾಡಿದ್ರs, ಆಕೀ ಜನ್ಮದ ಗೋಳಾ ಕಟಗೊಂಡ್ಹಾಂಗಾ-ದೀತೂ........ " ಗೌಡರು ಎಲ್ಲರನ್ನು ಚಂಡು ಹಿಡಿದು ದಬ್ಬಿಸಿಬಿಟ್ಟರು.

ಸೋದರತ್ತೆ ಮತ್ತೆ ಬಂದಳು........... "ಇದೇನು, ಇಕೀ ದಂಡೆ ಕಟ್ಟಲಿಕ್ಹತ್ಯಾರೋ, ಹರೀಲಿಕ್ಹತ್ಯಾರೋ ? ........" "ಹರೀತಾರ —ಹರೀತಾರs...........ಇಲ್ಲೀ ಕುಂತೈತಿ ಆಕೀ ಗಂಡನ ಹೆಣಾ ಆಕೀ ಬಾಜುಕs........" ಎಂದು ಮದುವಣಿಗ ಕತ್ತೆ ಹೇಂಕರಿಸಿತು.

ಸೋದರತ್ತೆ ದಿಙ್ಮೂಢಳಾದಳು. ನಿಂತಲ್ಲಿಯೇ ಕ್ಷಣಹೊತ್ತು ಹೌಹಾರಿ ನಿಂತುಬಿಟ್ಟಳು. ಹುಲಿಯ ದವಡೆಯಲ್ಲಿ ಸಿಕ್ಕಿದ್ದರೂ ಸೊಸೆಯನ್ನು ಬಿಡಿಸಿಕೊಂಡು ಬಂದೇ ತೀರೇನೆಂಬ ಹಟದಿಂದ ಬಂದಿದ್ದ ಅವಳಿಗೆ, ಸಾವಧಾನಳಾದಾಗ ಕೆಲಸವು ಕೈಮಿಾರಿ ಹೋಗಿದೆಯೆಂದು ಗೊತ್ತಾಯಿತು; ಬಂದ ಮೋಟಾರಿನಿಂದ ಹಾಗೆಯೇ ಊರಿಗೆ ತೆರಳಿ-ಬಿಟ್ಟಳು.

ಮರುದಿವಸ ನೀಲಿಯು ಅತ್ತೆಯ ಮನೆಗೆ ಬಂದಳು. ಒಂದುತುಟಿ ಎರಡು ಮಾಡದೆ, ಅತ್ಯಂತ ಪ್ರೀತಿಯಿಂದ ಎಲ್ಲರೊಡನೆ ನಿತ್ಯವೂ ಇರಲಾರಂಭಿಸಿದಳು. " ನಾ ಹೇಳ್ಳಿಲ್ಲs, ಮದಿವ್ಯಾದ ಮ್ಯಾಗ ತಾನs ಹಾದಿಗೆ ಬರ್ತ್ತಾಳಂತ..........." ಕ್ಯಾರಕೊಪ್ಪದ ಗೌಡನಾದ ಅವಳ ಮಾವ ನುಡಿದನು.

ಶಿದ್ಲಿಂಗಗೌಡನಂತೂ ನೀಲೆಯ ಸೇವೆಯಿಂದ ಸದಾ ಸಂತುಷ್ಟ-ನಾಗಿರುವನು; ಅವಳ ಅಚ್ಚುಕಟ್ಟುತನ, ಕೆಲಸ-ದೊಗಸೆ ಇವನ್ನೇ ಬಾಯಿಬಿಡುತ್ತ ನೋಡುತ್ತಿರುವನು.

ಅವಳ ತಾಯಿತಂದೆಗಳಿಗೂ ಸಂತೋಷವಾಯಿತು. ಮೊದ-ಮೊದಲು ಅವಳನ್ನೆಲ್ಲರೂ ಬಂಧನದಲ್ಲಿಟ್ಟಿದ್ದರು. ಆದರೆ ಈಗ

ಒಂದಾರು ತಿಂಗಳೊಪ್ಪತ್ತಿನಲ್ಲಿಯೆ ಅವಳು ಎಲ್ಲರ ಪ್ರೀತಿಗೆ ಪಾತ್ರಳಾಗಿದ್ದಾಳೆ; ಅವಳೀಗ ಸಂಪೂರ್ಣ ಸ್ವತಂತ್ರಳು.

ಇತ್ತ ಶಂಕರನ ಮದುವೆ ಒಬ್ಬ ಸುಶಿಕ್ಷಿತೆಯೊಡನೆ ಆಗಿ ಹೋಯಿತು.

ಅವನ ಮದುವೆಗೆ ಲೀಲೆಯು ತನ್ನ ಪತಿಯೊಡನೆ ಬಂದಿದ್ದವಳು ಎರಡು ತಿಂಗಳು ಅಲ್ಲಿಯೇ ಇದ್ದು ಊರಿಗೆ ತೆರಳಿದಳು. ಮುಂದೆ ಮಾತ್ರ, ಪ್ರತಿ ತಿಂಗಳಲ್ಲಿಯೂ ಒಂದು ದಿವಸ ಮಾತ್ರ ಧಾರವಾಡಕ್ಕೆ ಬಂದು ಶಂಕರಮಾಮಾನಲ್ಲಿ ಅತ್ಯಾನಂದದಿಂದಿದ್ದು ಹೋಗುವಳು. ಶಂಕರನ ನಗೆಮುಖ ನೋಡಿ ಹಿರಿಹಿರಿ ಹಿಗ್ಗುವಳು. ಅವಳ ಪತಿಯೂ ಇದಕ್ಕೆ ಎಂದಿಗೂ ಅಡ್ಡವಾಗಿ ಬರಲಿಲ್ಲ. ದೇವರ ಮೇಲಿನ ಹೂವು ತಪ್ಪೀತು, ಅವಳ ಈ ಪರಿಪಾಠವೆಂದಿಗೂ ತಪ್ಪಲಿಲ್ಲ.

---

# ಮಹಾಶಿವರಾತ್ರಿ

ಗೋವಿಂದನು ಬಳಗದ ಮನೆಯವನು, ಆರಂಭದ ಮನೆಯವನು. ಮನೆತುಂಬ ಮಕ್ಕಳು, ಕೊಟ್ಟಡಿಯ ತುಂಬ ದನಗಳು. ಮಕ್ಕಳಲ್ಲಿ ಹೆಣ್ಣುಮಗುಗಳು ಹೆಚ್ಚು, ದನಗಳಲ್ಲಿ ಹೋರಿಗಳು ಹೆಚ್ಚು. ಅವನ ಮನೆಯ ಹಿತ್ತಿಲು ಬಹಳ ದೊಡ್ಡದು. ಹಿತ್ತಿಲಲ್ಲಿ ದನಗಳಿಗಾಗಿ ಸಿಹಿನೀರಿನಿಂದ ತುಂಬಿಟ್ಟ ದೊಡ್ಡದೊಂದು ಕಲ್ಲುಡೋಣಿ—ಜನಗಳಿಗಾಗಿ ಬಟ್ಟೆಬರೆ ಒಗೆಯುವದಕ್ಕೋಸ್ಕರ ತುಂಬಿಟ್ಟ ದೊಡ್ಡದೊಂದು ಟಬ್ಬು. ಹಿತ್ತಿಲ ಒಂದು ಭಾಗಕ್ಕೆ ದೊಡ್ಡದಾದ ಬಾಗಿಲು ಹಚ್ಚಿದ ಬಾಂವಿ. ಒಂದು ಬದಿಗೆ ಸುಂದರವಾದ ತುಳಸೀ ವೃಂದಾವನ, ಒಂದು ಹಳೆಯ ಹುಣಸೇಮರ, ಒಂದು ನುಗ್ಗಿಯಗಿಡ, ಒಂದು ಚೊಗಚಿಯ ಗಿಡ-ಆಮೇಲೆ ಅಲ್ಲಲ್ಲಿ ಉಳಿದ ಸಣ್ಣಪುಟ್ಟ ಹೂ-ಕಾಯಿ ಗಿಡಗಳು ಕೆಲವು.

ಆಗ ಗೋವಿಂದನಿಗೆಂಟು ತುಂಬಿತ್ತು. ಎಷ್ಟು ಮುದ್ದುಮುದ್ದಾಗಿ ಹಾಡುವನು, ಕೊಳಲನ್ನೆಷ್ಟು ಇಂಪಾಗಿ ಬಾರಿಸುವನು! ಬಾರಿಸಿದ್ದನ್ನೇ, ಹಾಡಿದ್ದನ್ನೇ ಮತ್ತೆ ಸುಂದರವಾಗಿ ಸಿಳ್ಳು ಹೊಡೆಯುವನು. ಯಾರು ಏನೆಂದರೂ ಅನ್ನಿಸಿಕೊಳ್ಳುವನು, ಹೊಡೆದರೂ ಹೊಡೆಯಿಸಿಕೊಳ್ಳುವನು—ಆದರೆ ತನ್ನ ಕೆಲವು ಕಾಯಕಗಳನ್ನು ಮಾತ್ರ ಒಂದು ದಿನವೂ ಬಿಡುತ್ತಿದ್ದಿಲ್ಲ. ಸ್ವಭಾವ ಒಳ್ಳೆಯದು. ಚಿತ್ರಗಳ ಮೇಲೆ ಪ್ರೀತಿ ಬಹಳ; ಅದರಂತೆಯೆ ಸಿನೇಮಾದ ಹುಚ್ಚು ವಿಪರೀತ. ಮೂರುದಿನಕ್ಕೊಮ್ಮೆ ಸಿನೇಮಾದ ಹೊಸ ಆಟವಿರುವಾಗ, ಹೇಗೋ ಯಾರ ಕಡೆಯಿಂದಲೋ ರೊಕ್ಕ ಸೆಳೆದುಕೊಂಡು ಥಿಯೇಟರಿಗೆ ಓಡುವನು. ಗಂಡಸರಿಗಿಂತ ವಿಶೇಷವಾಗಿ ಹೆಂಗಸರೇ ಅವನಿಗೆ ರೊಕ್ಕಕೊಡುವವರು, ಸಿನೇಮಾಕ್ಕೆ ಕಳಿಸುವವರು. ಆದರೆ ಪ್ರತಿಯೊಬ್ಬಳೂ ರೊಕ್ಕಕೊಟ್ಟಕೂಡಲೆ, " ಒಬ್ಬನss ಹೋಗ್ತಿಯೇನಪ್ಪಾ, ಗೋವಿಂದಾ, ನಿನ್ನ ಹೆಂಡಂದಿರನ್ನ ಕರಕೊಂಡು ಹೋಗೂ

ದಿಲ್ಲೇನು, ನೋಡ್ಲಿಕ್ಕೆ ? " ಎನ್ನಬೇಕು. ಆಯಿತು, ಅವನೂ ನಿರ್ವಾಹ ವಿಲ್ಲದೆ ಕರಕೊಂಡು ಹೊರಡುತ್ತಿದ್ದನು—ಕುರುಬನು ದಡ್ಡಿಯೊಳಗಿನ ಕುರಿಗಳನ್ನು ಅಟ್ಟಿಕೊಂಡು ಹೊರಡುವಂತೆ ! ಮರಳಿ ಬರುವಾಗ ತೀರ ಚಿಕ್ಕವಾದ ಒಂದೆರಡನ್ನು ಹೆಗಲಮೇಲೆ ಹೇರಿಕೊಂಡು, ಒಂದೆರಡನ್ನು ಸಂಗಡ ಕರೆದುಕೊಂಡು, ಸ್ವಲ್ಪ ದೊಡ್ಡ ಹುಡುಗಿಯರನ್ನು ಚಿಕ್ಕವರನ್ನೆ-ತ್ತಿಕೊಳ್ಳದ್ದಕ್ಕೆ ದೂರವಾಗಿ ಹಿಂದಕ್ಕೆ ಬಿಟ್ಟು, ಮುಂದೆ ಓಡಿಬರುವನು.

ದಿನಾಲು ಮುಂಜಾನೆ ಎಲ್ಲರೊಡನೆ ಚಹಾ-ಫಲಾಹಾರಕ್ಕೆ ಕುಳಿತುಕೊಳ್ಳುವನು. ಆಗ ಇವನ ತಂದೆ ನೋಡಿ, " ಗೋವಿಂದಾ, ಅಭ್ಯಾಸಕ್ಕೆ ಕೂಡ್ರು, ನಡೆ ! " ಎಂದು ಬೆಗರಿಸಿ, ಕಚೇರಿಗೆ ಹೊರಟು ಹೋಗುವರು ; ಮೆಲ್ಲಗೆ ಹೂಕಾರಾರ್ಥವಾಗಿ ಉತ್ತರ ಕೊಡುವನು. ಅವರು ಓಣಿಯನ್ನು ದಾಟುವವರೆಗೆ ಬಾಗಿಲಲ್ಲಿ ನಿಂತು ನೋಡುವನು; ಕೂಡಲೆ ಹಕ್ಕೆಯೊಳಗಿನ ನಾಲ್ಕಾರು ಚಿಕ್ಕವಾದ ಚಂದವಾದ ಹೋರಿ ಗಳನ್ನು ಬಿಚ್ಚಿ, ' ಹಲೆ-ಹಲೆ-ಚಕ್-ಚಕ್ ' ಎನ್ನುತ್ತ, ಅವುಗಳನ್ನು ಬೀದಿಗಳಲ್ಲಿ ಟಣ್‌ಪುಣ್ ಹಾರಾಡಿಸುತ್ತ, ತಾನೂ ಅವುಗಳ ಬೆನ್ನುಹತ್ತಿ ಓಡಾಡುವನು. ಮನೆಯೊಳಗಿನ ಹುಡುಗಿಯರ ತಂಡವೆಲ್ಲ, ಹೆಬ್ಬಾಗಿಲ ಕಟ್ಟೆಯ ಮೇಲೆ ಕುಳಿತು ಈ ಚಿನ್ನಾಟಗೆಯನ್ನು ನೋಡಿ ನಗುವದು; ಗೋವಿಂದನು ಒಮ್ಮೊಮ್ಮೆ ಹೋರಿಗಳನ್ನು ಬೆದರಿಸು-ತ್ತಿದ್ದನು.—ಒಮ್ಮೊಮ್ಮೆ ಅವು ಇವನಿಗೆ ಇರಿಯಬರುತ್ತಿದ್ದವು. ಅವುಗಳಿಗೆ ಕೋಡುಗಳಂತೂ ಇಲ್ಲವೇ ಇಲ್ಲ—ಅವುಗಳ ಬಾಲವನ್ನು ಹಿಡಿದು ಮನೆಯ ಕಡೆಗೆ ಜಗ್ಗಹೋದ ಕೂಡಲೆ, ಅವುಗಳೇ ಇವನನ್ನು ದರದರವಾಗಿ ಎಳೆದುಕೊಂಡು ಭರದಿಂದ ಓಡುವವು; ಆಗ ಹುಡುಗಿ ಯರೆಲ್ಲ ಚಪ್ಪಾಳೆಯಿಕ್ಕಿ ನಗುವರು.

ಒಂದು ದಿನ ಮುಂಜಾನೆ ಸಿಹಿನೀರಿನ ಕೊಡವನ್ನು ಹೊತ್ತು-ಕೊಂಡು ಎದುರಿಗೆ ಬರುತ್ತಿದ್ದ ತನ್ನ ತಾಯಿಯನ್ನು ಕಂಡೊಡನೆಯೆ " ಅವ್ವಾ, ಎಲ್ಲಾ ಹೋರಿ ಬಿಚಿಗೊಂಡ ಬಿಟ್ಟಾವ ನೋಡವ್ವಾ "

ಎಂದಂದನು. "ಒಳಗ ತಾರಪ್ಪಾ" ಎಂದು ಅವಳೆಂದಕೂಡಲೆ "ಕೈಗೇನೂ ಸಿಗವಲ್ಲವು" ಎನ್ನುತ್ತ, ಆಟ ಮುಗಿದ ಮೇಲೆ ಒಳಗೆ ಬಂದನು. ತಾಯಿಯು ಒದಿಕೆ ಬಿದ್ದಕೂಡಲೆ, ಪಡಸಾಲೆಯೊಳಗಿನ ತನ್ನ ಕೋಣೆಯಲ್ಲಿ ಹೋಗಿ ಬಾಗಿಲಿಕ್ಕಿಕೊಂಡು ಕುಳಿತುಕೊಂಡನು. ಇದನ್ನೆಲ್ಲ ನೋಡಿ, ಹುಡುಗಿಯರು ಗಾಬರಿಯಾಗಿ, ಒಬ್ಬರ ಮೋರೆಯನ್ನೊಬ್ಬರು ಹುಳುಹುಳು ನೋಡುತ್ತ ಇದ್ದಕ್ಕಿದ್ದಲ್ಲಿಯೇ ತಣ್ಣಗಾಗಿ ಬಿಟ್ಟರು. ಒಂದರ್ಧ ಗಂಟೆಯ ವರೆಗೆ ಅಭ್ಯಾಸ ಮಾಡಿಕೊಂಡು ಬಾಗಿಲು ತೆಗೆದು ಹೊರಕ್ಕೆ ಬಂದನು; ಒಂದು ಕೈಯಲ್ಲಿ ಅಂಕಗಣಿತ, ಒಂದು ಕೈಯಲ್ಲಿ ನೋಟು ಬುಕ್ಕು—ಇವುಗಳನ್ನು ಹಿಡಿದುಕೊಂಡು ತಾಯಿಯ ಬಳಿ ಬಂದು, "ಅವ್ವಾ, ನವಲೂರ ಶೀನೂನ ಮನೀಗೆ ಹೋಗಿ, ನಿನ್ನೆ ಮಾಸ್ತರರು ಹೇಳಿದ ಲೆಖ್ಖಾ ಬರವಲ್ದೊ—ಸಂಖ್ಯಾ ತಪ್ಪೇದೇನು ನೋಡಿಕೊಂಡು ಬರ್ತೇನಿ" ಎಂದನು. "ಲಗೂ ಬಾ ಹಂs, ಹತ್ತು ಹೊಡೀಲಿಕ್ಕೆ ಬಂದದ, ಇನ್ನೂ ನಿನ್ನ ಸ್ನಾನಾ-ಊಟಾ ಆಗಬೇಕಾಗೇದ" ಎಂದಳು ತಾಯಿ. ಅರ್ಧ ಗಂಟೆಯಲ್ಲಿಯೆ ಮರಳಿ ಬಂದನು. ಅವನ ಸಣ್ಣ ಅಕ್ಕನು ಗಪ್ಪನೇ ಪಾಯಜಮೆಯ ಮೇಲೆ ಕೈಯಾಡಿಸಿದವಳೇ, "ಕಳ್ಳಾ, ಈಸಬಿದ್ದು ಬಂದೀ ಹೌದಲ್ಲೊ ಆ ಜಕಣೀ ಭಾಂವೀ ಒಳಗ! ಅಲ್ಲೆಲ್ಲಾ ತುಂಬ ಕಸ್ಲುಫಡೀ ಅವ, ಎಲ್ಲೆರ ತಲೀ ಗಿಲೀ ಸಿಕ್ಕೀತಪ್ಪಾ, ಹಾಂಗ ಹೋಗತ ಬರಬ್ಯಾಡಾ" ಎಂದಳು. ಕೂಡಲೆ ತಾಯಿ ಗದ್ದರಿಸಿದಳು, "ಸಾಯಲಿ, ಅರಿಷ್ಟ ಖೋಡಿ, ಅವನ ಮರಣ ಒಂದಿಷ್ಟ ಭಾಂವೀ ಒಳಗs ಅದ—ನಾನಗ ಗೊತ್ತದ."

ಊಟ ಮಾಡಿ ಶಾಲೆಗೆ ಹೋದನು. ಸಾಯಂಕಾಲ ಮನೆಯಲ್ಲಿ ಕುಂಟುತ್ತಲೇ ಕಾಲಿಟ್ಟನು. ಅವನ ಹಿರಿಯಕ್ಕ "ಯಾಕಪ್ಪಾ, ಏನಾತೊ? ಎಲ್ಲಿಂದನೋ ಎತ್ತರದ ಮ್ಯಾಲಿಂದ ಬಿದ್ದೀ ಹೌದಲ್ಲೊ?" ಎಂದು ಕೇಳಿದಳು. ಅದಕ್ಕೆ ಅವನು ಸರಳವಾಗಿ ಹೇಳಿಬಿಟ್ಟನು,

"ನಿನ್ನೆ ಸಿನೇಮಾದಾಗ ಎಡ್ಡೀಪೋಲೋ ಛಪ್ಪರದಿಂದ ಗ್ವಾಡಿಗೆ, ಗ್ವಾಡಿಯಿಂದ ಛಾಂವಿಗೆ, ಛಾಂವಿಯಿಂದ ಅಟ್ಟೆಕ್ಕ ಜಿಗದದ್ದನ್ನು ನೋಡಿದ್ದೆ................" "ಛಪ್ಪರೆ! ಎಡ್ಡೀಪೋಲೋ" ಎಂದು ಹಿರಿಯಕ್ಕ ಅವನ ನೋವಿಗೆಲ್ಲ ಎಣ್ಣೆ ಸವರಿದಳು; ಅದಕ್ಕೆ ಕಿರಿಯಕ್ಕ, "ಅವಿವೇಕಾ, ಹಿಂಗೆಲ್ಲಾ ಜಿಗೀತ ಬರಬ್ಯಾಡಾ—ಎಲ್ಲೆರ ಜೀವಾ ಕೊಟ್ಟೀ ?" ಎಂದು ಬುದ್ಧಿ ಹೇಳಿದಳು.

ಮುಂದೆ ನಾಲ್ಕೈದು ದಿನಗಳ ವರೆಗೆ ಮನೆ ಹಿಡಿದೇ ಬಿದ್ದಿದ್ದನು. ಯಾರಾದರೂ ಸಿಟ್ಟುಮಾಡಿದರೆ, ಬಿದ್ದಲ್ಲಿಯೇ ಸ್ವಲ್ಪ ಕೈಯಲ್ಲಿ ಪುಸ್ತಕ ಹಿಡಿಯಬೇಕು; ಇಲ್ಲವಾದರೆ ಎಲ್ಲರ ಕಣ್ಣು ತಪ್ಪಿಸಿ, ಕೋಣೆಯ ಬಾಗಿಲನ್ನು ಒಳಗಿನಿಂದ ಹಾಕಿಕೊಂಡು, ಗೋಡೆಗಳಿಗೆಲ್ಲ ಸಿನೇಮಾದ ಸುಂದರವಾದ ಚಿತ್ರಗಳನ್ನಂಟಿಸುತ್ತ ಕೂಡಬೇಕು. ಅಷ್ಟರಲ್ಲಿ ಹುಡುಗಿಯರೆಲ್ಲ ಒಟ್ಟಾಗಿ ಸೇರಿ ಬಂದು ಬಾಗಿಲ ಬಡಿಯುತ್ತಿದ್ದರು. "ಏ ಹೋಗ್ರೆ, ಸುಮ್ಮನ ಯಾಕ ತ್ರಾಸ ಕೊಡ್ತಿರೇ ನನಗ, ಜಡ್ಡಿನ್ಯಾಗ ?" ಎಂದು ಬೆದರಿಸುತ್ತ ಮೆಲ್ಲಗೆ ಎದ್ದು ಬಾಗಿಲು ತೆಗೆದನು. ಪ್ರತಿಯೊಬ್ಬರೂ "ಗೋವಿಂದಾ, ನನಗ ಕಾಗದದ ಹಡಗು ಮಾಡಿ ಕೊಡೋ, ನನಗೋ, ನನಗೋ..." ಎಂದು ಅವನನ್ನು ಗೋಳಿಡಿಸಿದರು. ಎಲ್ಲಕ್ಕೂ ಹಿರಿಯಳು ಭೀಮಿ.

"ಏ, ಹೋಗಸ, ಭೀಮಿ. ನಾಯೇನ ನಿನಗ ಹಡಗಾ ಮಾಡಿ ಕೊಟ್ಟಾಂವಲ್ಲ ನೋಡು---ನಿನ್ನೆ ಸಿನೇಮಾದಿಂದ ಬರುವಾಗ ಸ್ವಲ್ಪು ಗಂಗೀನ್ನ ಕರಕೋ ಅಂದ್ರ ಕರಕೊಳ್ಳಿಲ್ಲಾ—"

"ಮತ್ತ ಸುಂದ್ರಿನ್ನ ಕರಕೊಳ್ಳಿಲ್ಲೇನಪ್ಪಾ ಅರ್ಧಾ ಹಾದೀ ತನಕಾ !"

"ಮತ್ತ ಅರ್ಧಾ ಹಾದೀತನಕಾ ಬರೇ ಕೈ ಬೀಸಿಗೋತ ಬರ್ಲಿಲ್ಲೇನವ್ವಾ ನೀನು !"

"ಇನ್ನೊಮ್ಮೆ ಹಾಂಗ ಮಾಡೂದುಲ್ಲಪ್ಪಾ !"

" ಹಾಂಗಾರ ಎಲ್ಲಾರ ಕಡಿಂದ ಗಲ್ಲಾ ಗಲ್ಲಾ ಹೊಡಿಸಿಗೋ, ತಪ್ಪಾತಂತ. "

ಎಲ್ಲರೂ ಭೀಮಿಗೊಂದೊಂದು ಸಣ್ಣಾಸ್ನ ಏಟು ಕೊಟ್ಟರು. ಯಾವಳೊಬ್ಬಳು ತನ್ನ ಮನಸಿನ ವಿರುದ್ಧ ನಡೆದರೆ, ಉಳಿದ ಎಲ್ಲರ ಕಡೆಯಿಂದ ಮೆಲ್ಲಗೆ ಅವಳಿಗೆ ಕಪಾಳಕ್ಕೆ ಏಟು ಕೊಡಿಸುವ ಶಿಕ್ಷೆಯ ಪದ್ಧತಿಯು ಗೋವಿಂದನದು.

ಅಷ್ಟರಲ್ಲಿ ಮಾಲಿಯು "ಗೋವಿಂದಾ, ನನಗೊಂದು ಗಂಡು ಹಡಗಪಡೀ ಮಾಡಿಕೊಡು" ಎಂದಳು. ಅವಳ ಮೇಲೆ ಗೋವಿಂದನ ಪ್ರೀತಿ ಬಹಳ. ಹಾ, ಹಾ ಅನ್ನುವಷ್ಟರಲ್ಲಿ ಅಬಚಿಯಂದಿರ ಹದಿನೈದು ಮಕ್ಕಳಿಗೆ ಹದಿನೈದು, ಮಾವಂದಿರ ಒಂಬತ್ತು ಮಕ್ಕಳಿಗೆ ಒಂಬತ್ತು, ಹಿರಿಯಕ್ಕನ ಮಗಳು ಮಾಲಿಗೊಂದು ಗಂಡು ಹಡಗು ಮಾಡಿಕೊಂಡು ಕುಂಟುತ್ತ ಎದ್ದನು. "ಏ, ಮನೀ ಮುಂದಿಗೆ ಗೊತ್ತಾಗದ್ಹಾಂಗ ಎಲ್ಲಾರೂ ಹಿತ್ತಲದಾಗ ನಡೀರೇ !" ಎಲ್ಲ ನಟಿಯರೂ ಡಾಯರೆಕ್ಟರನ ಸೂಚನೆಯ ಮೇರೆಗೆ ಹಿತ್ತಿಲಿಗೆ ಬಂದರು. ಕಲ್ಲು ಡೋಣಿಯ ಮೇಲೆ, ಕಾಲು ನೀರಲ್ಲಿ ಇಳಿಬಿಟ್ಟು ಕೂಡಲು ಎಲ್ಲರಿಗೆ ಹೇಳಿದ. ಅವರವರ ಹಡಗುಗಳನ್ನು ತಮ್ಮತಮ್ಮೆದುರಿಗೆ ನೀರಲ್ಲ ತೇಲಿಬಿಟ್ಟು ಕೈಹಿಡಿದು ಕೂಡಲು ಹೇಳಿದ. ನಾಲ್ಕೈದು ನಿಮಿಷ ಹೀಗೆಯೇ ಕುಳಿತಿರುವಾಗ, ತಾನೂ ಕೈಯಲ್ಲೊಂದು ದಂಟು ಹಿಡಿದು ನಾವಿಕನಾಗಿ ಹುಟ್ಟು ನಡೆಸಿದನು. ಆಮೇಲೆ ಎರಡು ನಿಮಿಷ ಬಿಟ್ಟು, "ಹೂ, ಇಳೀರೇ, ಊರು ಬಂತು" ಎಂದನು. ಇಳಿದರು. ಎಲ್ಲರನ್ನೂ ವೃಂದಾವನದ ಸುತ್ತಲಿನ ದೊಡ್ಡ ಕಟ್ಟೆಯ ಮೇಲೆ ಕುಳ್ಳಿರಿಸಿದ. ತಾನು ಮುಖ್ಯ ವೃಂದಾವನದ ಕಟ್ಟೆಯ ಮೇಲೆ ಕುಳಿತು ಕೃಷ್ಣನ ಹಾಗೆ ಕೊಳಲು ನುಡಿಸಹತ್ತಿದ. ಆ ಕೊಳಲಿನದೊಂದು ಕತೆಯೇ. ಮನೆಯವರಿಗೆ ಎಷ್ಟು ಕಾಡಿದರೂ ಯಾರೂ ಕೊಳಲು ಕೊಡಿಸಲಿಲ್ಲ. ಕಡೆಗೆ ದನಕಾಯುವ ಕಾಶ್ಯಾನ ಸಹಾಯದಿಂದ, ಕಾದ ಮೊಳೆಯನ್ನು ಬಿದಿರಿಗೆ ಚುಚ್ಚಿ ಚುಚ್ಚಿ, ಸಪ್ತಸ್ವರಗಳನ್ನೂ ಸರಿಯಾಗಿ ಹೊಂದಿಸಿ-

ಕೊಂಡಿದ್ದನು. “ಹೂಂ, ಮೊನ್ನೆ ನಾ ಕಲಿಸಿದ್ಹಾಂಗ, ಎಲ್ಲಾರೂ ದುಂಡಗ ನನ್ನ ಸುತ್ತಲೂ ತಿರಗ್ರೀ. ಏ ಲೀಲಾ, ಬೇಬಿ, ಸರೂ, ಭೀಮ್ಯಾ, ಅಲ್ಲೆ ನೋಡ್ರಿ, ಮಾಲಿ, ತಾಯಿ, ಪಚ್ಚಿ, ಸೂಸಿ ಹ್ಯಾಂಗ ಛಂದಾಗಿ ಹಾಡನಕೋತ ತಿರಗಲಿಕ್ಹತ್ತ್ಯಾರ........” “ಗೋವಿಂದಾ, ಕಾಲು ನೋವಾಗೇದಂತ ನಾಲ್ಕು ದಿವಸಾತೂ, ಮನೀ ಹಿಡಿದು ಕೂತೀದಿ. ಸಾಲೀ....?” ಒಳಗಿನಿಂದ ಅವ್ವನ ಕೂಗು ಕೇಳಿಸಿತು. ಗಾಬರಿಯಾಗಿ ಟಣ್ಣನೆ ಜಿಗಿದು ಬಿಟ್ಟನು. ಮಾಯುತ್ತ ಬಂದ ಮೊಳಕಾಲ ನೋವು ಒಡೆದು ರಕ್ತ ಸೋರಹತ್ತಿತು— “ಗೋವಿಂದಾ, ನನ್ನ ಪರಕಾರದ್ಲೇ ಒರಸು—ಹಿಡೀ, ನನ್ನ ಪೋಲಕಾದ್ಲೇ ಒರಸು........” ಹೀಗೆ ಅವನ ಗೋಪಿಯರೆಲ್ಲ ಗಡಿಬಿಡಿ ಮಾಡಹತ್ತಿದರು. ಅಷ್ಟರಲ್ಲಿ ಒಬ್ಬ ಮಾವನು ಬಂದು ಹುಡುಗಿಯರೆಲ್ಲರಿಗೊಂದೊಂದು ಏಟು ಬಿಟ್ಟು, ಇವನ ಜುಟ್ಟನ್ನು ಹಿಡಿದು ದರದರನೆ ಎಳೆದೊಯ್ದು ಊಟಕ್ಕೆ ಕೂಡ್ರಿಸಿದನು.

ಗೋವಿಂದನಿಗೀಗ ಒಂಬತ್ತು ತುಂಬಿ ಮೇಲೆ ಆರು ತಿಂಗಳಾಗಿದ್ದವು; ಅವನೀಗ ಇಂಗ್ಲೀಷು ಶಾಲೆಗೆ ಹೋಗುತ್ತಿದ್ದನು. ಒಂದು ದಿವಸ ಸಾಯಕಲ್ಲ ಮೇಲಿಂದಲೇ ಶಾಲೆಯಿಂದ ಮನೆಗೆ ಬಂದನು. “ಕಾಲಿಗೇನಾಗೇದೋ?” “ಅಕ್ಕಾ, ಸಾಯಕಲ್ಲ ಮ್ಯಾಲಿಂದ ಬಿದ್ದೇನವ್ವಾ ಅವ್ವನ ಮುಂದ ಹೇಳಬ್ಯಾಡಾ....” “ಸಾಯಕಲ್ಲು ಬ್ಯಾರೇ ಕಲೀಲಿಕ್ಹತ್ತೀ ಹೌದs?” “ಕಲಿಯೋದ ಮುಗದದ-ನಾ ಒಬ್ಬಾವನs ಆದರs ಭಾಳs ಛಲೋ ಹೊಡೀತೆನಿ ಬಿಡೂ—ಇನ್ನ ಒರೇ ಯಾವದರ ಒಂದು ಹುಡಿಗಿನ್ನ ಕೂಡ್ರಿಸಿಕೊಂಡು ಹೊಡೀಲಿಕ್ಕೆ ಕಲಿಯೋವಷ್ಟು ಮಾತ್ರ ಉಳದದ.” “ಅಷ್ಟು ಮಾತ್ರ ದಯಮಾಡಿ ಮಾಡಬ್ಯಾಡಪ್ಪಾ!”

ಒಂದು ರವಿವಾರ ಮಧ್ಯಾಹ್ನ ಹೆಣ್ಣುಮಕ್ಕಳೆಲ್ಲರು ತಮ್ಮ ತಮ್ಮ ಕೆಲಸಗಳನ್ನು ತೀರಿಸಿಕೊಂಡು ಅಡ್ಡಾಗಿದ್ದರು. ಗಂಡಸರೆಲ್ಲ

ನೆರೆಮನೆಯ ಅಟ್ಟದ ಮೇಲೆ ಕ್ಷಣಹೊತ್ತು ವಿಶ್ರಾಂತಿಗಾಗಿಯೆಂದು ಹೋಗಿದ್ದರು. ಗೋವಿಂದನು ಅಭ್ಯಾಸ ಮುಗಿಸಿಕೊಂಡು ಕೋಣೆಯ ಹೊರಗೆ ಬಂದನು. ಎಲ್ಲ ಹುಡುಗಿಯರೂ ತಮ್ಮ ತಮ್ಮ ತಾಯಂದಿರ ಬಳಿ ಅಡ್ಡಾಗಿದ್ದರು. ಅವರಿಗೆ ಗಾಢ ನಿದ್ರೆ ಹತ್ತಿದುದನ್ನು ನೋಡಿ ಮರಳಿ ಕೋಣೆಗೆ ಬಂದನು. ಲೋಡಿಗೆ ಆತುಕೊಂಡು ಕುಳಿತು ಸಂಪಾಗಿ ಕಳ್ಳಧ್ವನಿಯಲ್ಲಿ ಹಾಡಲಾರಂಬಿಸಿದನು. ಮೊದಲು ಮಾಲಿಯು ಎಚ್ಚತ್ತಳು. ಮೆಲ್ಲಗೆ ಸುಶೀಲೆಯ ಕಿವಿಯಲ್ಲಿ, " ಏ ಸುಶಾ, ನಮ್ಮ ಗೋವಿಂದರಾವ ಟೇಂಬೆ ಹಾಡಲಿಕ್ಹತ್ತ್ಯಾನ ಬಾರs! ಲಗೂ ಏಳs !! " ಈ ಗುಣುಗುಟ್ಟುವಿಕೆಯನ್ನು ಕೇಳಿ ಎಲ್ಲ ಸೈನ್ಯವೂ ಎಚ್ಚರವಾಗಿ ಎದ್ದು ಕೋಣೆಯ ಕಡೆಗೆ ಓಡಿತು. ಎಲ್ಲರನ್ನೂ ಕೈಸನ್ನೆಯಿಂದ ಹಿತ್ತಿಲಲ್ಲಿ ಕರೆತಂದನು. ಒಬ್ಬಳ ಪರಕಾರವಾದರೆ ಇನ್ನೊಬ್ಬಳ ಪೋಲಕ, ಮತ್ತೊಬ್ಬಳ ಝುಂಪರು ಆದರೆ ಮಗದೊಬ್ಬಳ ಝುಗಾ, ಹೀಗೆಲ್ಲರ ಕಡೆಯಿಂದ ಒಂದೊಂದು ಅರಿವೆಗಳನ್ನು ಇಸಿದುಕೊಂಡು, ಸರ್ರನೆ ಹುಣಸೆಯ ಮರವನ್ನೇರಿ, ಒಂದೊಂದು ಟೊಂಗೆಗೆ ಒಂದೊಂದು ಅರಿವೆಯನ್ನು ಹಾಕಿದ. ಕೊಳಲು ನುಡಿಸಹತ್ತಿದ " ಆಜ ಶ್ಯಾಮ-ಮೋಹಲಿನೊ ಬಾಸರಿ ಬಜಾಯಕೆ...." "ಗೋವಿಂದಾ—ತಾರಪ್ಪಾ ನಮ್ಮ ಅರಿವಿ—ಮನೀ ಒಳಗ ಅವ್ವ ಬೈತಾಳ—ಬರೇ ಥಾಂದಲೆ ಹಾಕ್ತಿದೆಂತ...." ಹೀಗೆ ಪ್ರತಿಯೊಬ್ಬಳೂ ಕೇಳಿದಳು. " ಅಲ್ರೇ, ಮೊನ್ನೆ ನಾನು ಸಿನೇಮಾದಾಗ ಕೃಷ್ಣನ ಹಾಂಗ ನಾವೂ ಆಡೋ-ಣವ್ವಾ ಅಂದ್ರ ನೀವೆಲ್ಲಾ ಹೂಂ ಅನ್ನಲಿಲ್ಲ ಮತ್ತ? ಹಾಂಗಾರ ಲಗೂನ ಆಟಾ ಆಡಿ ಮುಗಿಸೋಣ—ಮೊನ್ನೆ ನಾ ಕಲಿಸಿದ್ದ ಚುಟಕೀ ಅನ್ರಿ ಲಗೂನ........ ಆ ಗೋಪ್ಯಾರ್ಹಾಂಗ. " " ಹೂ, ಅಂತೇವಿ ಕೊಡಪ್ಪಾ...." ಡೋಣಿಯಲ್ಲಿ ಒಂದಿಬ್ಬರು, ಟಬ್ಬಿನಲ್ಲಿ ಒಂದಿಬ್ಬರು, ಒಬ್ಬಿಬ್ಬರು ಗಿಡದಡಿಯಲ್ಲಿ, ನಾಲ್ಕಾರು ಜನರು ವೃಂದಾವನದ ಕಟ್ಟೆಯ ಮೇಲೆ, ಹೀಗೆಲ್ಲರೂ ಕೈಮುಗಿದುಕೊಂಡು ನಿಂತರು,

"ಶ್ಯಾಮ ಚುನರಿಯಾ ದೇ ದೇ ಮೋರೀ, ಬಾರಬಾರ ಕರ ಜೋಡತ ತುಮಸೆ|| ತನು ಮೋರಿ ಕಾಪನಲಾಗೆ ದೇಖೋ ಮುರಾರಿ || "

ಹಾಡಿನ ಪ್ರತಿಧ್ವನಿಯು ಒಳಗಿದ್ದ ಅವನ ಅಬಚಿಯ ಕಿವಿ-ಯನ್ನು ನೆಟ್ಟಗೆ ಮಾಡಿತು. ಹಿತ್ತಿಲಬಾಗಿಲಿಗೆ ಬಂದು ಮೆಲ್ಲಗೆ ಇಣಿಕಿದಳು, ಎಲ್ಲರನ್ನೂ ಎಬ್ಬಿಸಹೋದಳು; "ನೋಡ ನಡಿರೀ ನಮ್ಮವ್ವಾ, ಸುಮ್ಮನ ಅಂವಗ ಹೊಡಿಯೋದು, ಬೈಯೋದು ಮಾಡ್ತೀರೀ ಎಲ್ಲಾರೂ, ತಾ ಕೃಷ್ಣಾಗ್ಯಾನ, ಅವರೆಲ್ಲಾ ಇವನ ಗೋಪ್ಯಾರಾಗ್ಯಾರ, ಏನ ಛಂದಾಗಿ ಶೀರಿ ಸೆಳದ ಆಟಾ ಆಡ್ಲಿಕ್ಹತ್ತ್ಯಾರ —ಇಷ್ಟೆಲ್ಲಾ ಇಂವಾ ಯಾವಾಗ ಕಲತಿರತಾನೋ, ಇವರೆಲ್ಲಾ ಯಾವಾಗ ಕಲ್ತ ತಯಾರಾಗಿರತಾರೋ?" ಅಷ್ಟರಲ್ಲಿ ಹೆಗಲಮೇಲೆ ಗಳೆಯನ್ನು ಹೊತ್ತುಕೊಂಡು ಹೊಲದಿಂದೊಬ್ಬ ಮಾವ ಬಂದನು. "ಏ, ಗೋವ್ಯಾ, ಇಳೀತೀದ್ಯೋ ಏನ ಕಲ್ಲ ಸೆಳೀಲ್ಯೋ?" ಕೈಯ್ಯಲ್ಲೊಂದು ಕಲ್ಲನ್ನೆತ್ತಿದನು. ಗೋವಿಂದ ಟಣ್ಣನೆ ನುಗ್ಗಿಯ ಗಿಡಕ್ಕೆ ಹಾರಿದ—ಟೊಂಗೆ ಬಾಗಿತು, ಅದನ್ನೆ ಜೀಕಿಕೊಂಡು ಮುಂದಕ್ಕೆ ಜೋಲಿಯನ್ನು ಹೊಡೆದುಕೊಂಡು, ಚೊಗಚಿಯ ಟೊಂಗೆ ಹಿಡಿದನು. ಅದು ಲಟ್ಟನೆ ಮುರಿಯಿತು. ಕೆಳಗೆ ಕಟ್ಟೆಗೆ ಒಡೆದು ತುಂಡು ಒಟ್ಟಿ-ದ್ದರು. ವಿಶೇಷವೇನೂ ಆಗಲಿಲ್ಲ, ಆದರೂ ಸ್ವಲ್ಪ ನೋವು ಆಯಿತು. ಅಷ್ಟರಲ್ಲಿ ನಿದ್ರೆ ಮುಗಿಸಿಕೊಂಡು ಮುಖ ತೊಳೆಯಲೆಂದು ಹಿತ್ತಿಲಿಗೆ ಬಂದಿದ್ದ ಅವನ ಭಾವಯ್ಯ ನೋಡಿ, "ಏನಂತಾನ ನಮ್ಮ 'ವೂಂಡೆಡ್ ಸೋಲ್ಜರ!'" ಎಂದನು.

ಅಂತೂ ಹೀಗೆಯೇ ಚಿನ್ನಾಟವಾಡುತ್ತ ಕಾಲಹರಣ ಮಾಡು-ತ್ತಿರುವಾಗ ಗೋವಿಂದನು ಇಂಗ್ಲೀಷು ಎರಡನೇ ಇಯತ್ತೆಗೆ ಬಂದನು. ಬರುಬರುತ್ತ ಆಟವು ಕಡಿಮೆಯಾಯಿತು. ಒಂದು ದಿವಸ ಟಬ್ಬಿನಲ್ಲಿ ಎಲ್ಲ ಜೊತೆಗಾತಿಯರನ್ನು ಕೂಡಿಸಿಕೊಂಡು, "ಇದು ನದೀ, ಹಾ, ನದಿಯೊಳಗ ನಾ ಹುಟ್ಟು ನಡಸ್ತೇನಿ ಸುಮ್ಮನ ಕೂಡ್ರಿ" ಎನ್ನುತ್ತ

ದಂಟಿನಿಂದ ಹುಟ್ಟು ನಡೆಸಹತ್ತಿದನು. ಅಷ್ಟರಲ್ಲಿ ಎಲ್ಲ ಹುಡುಗಿಯರ ಕಾಲಿಗೇನೋ ಗುಳುಗುಳೆಂದು, ಮೆತ್ತಮೆತ್ತಗೆ ಅತ್ತಿತ್ತ ಏನೋ ಓಡಾಡುತ್ತಿರುವಂತೆ ಹತ್ತಿತು. ಕಡೆಗೆ ವಚ್ಚಿಗೆ ಅದು ಹಾವಿನಂತೆ ಕಂಡಿತು. "ಅಯ್ಯಯ್ಯೋ, ಗೋವಿಂದಾ, ಹಾವು!" ಎಲ್ಲರೂ ಬೆದರಿದರು. ಅಲ್ಲಿಯೇ ನೀರಲ್ಲಿ ಕುಣಿದಾಡಹತ್ತಿದರು. ಇವನು ಬಿದ್ದುಬಿದ್ದು ನಗಹತ್ತಿದ. "ನಾವು ಒಲ್ಲೆವೆಪ್ಪಾ, ಟಬ್ಬಿನೊಳಗಿಂದ ನಮಗ ಹೊರಗ ಇಳಿಸು" ಎಂದು ಅಂಗಲಾಚ ತೊಡಗಿದರು. "ಏ, ಟಬ್ಬೆಲ್ಲಿಂದ ತಂದ್ರೀ, ಇದು ಡೋಣಿ, ನದೀಯೊಳಗ ಸಾಗೇದ— ದಂಡೆರ ಬರ್ಲಿ ಸುಮ್ಮನಿರ್ರಿ! ನದೀಯೊಳಗ ಮತ್ತ ಹಾವುಪಾವು, ಮೊಸಳೀಪಸಳೀ ಇರೂವsನವ್ವಾ, ಮತ್ತು ಹೀಂಗೆಲ್ಲಾ ಹೆದರಿದ್ರಹ್ಯಾಂಗ ನೋಡು...." ಮತ್ತೆ ನಗಹತ್ತಿದ. ಆಗ ಹುಡುಗಿಯರು ಚೀರ ಹತ್ತಿದರು. ಆಗ ಮನೆಯ ಜನರು ಬಂದು ಸಿಟ್ಟು ಮಾಡಬಹು-ದೆಂದು ಬಗೆದು, "ನಾ ಎಲ್ಲಾ ನೋಡ್ತೇನಿ ಸುಮ್ಮನಿರ್ರಿ............" ಎನ್ನುತ್ತ ಕೊಳಲು ಊದಹತ್ತಿದ—ತನ್ನ ಕಾಲಿನಿಂದೇನೋ ಮೇಲ-ಕ್ಕೆತ್ತಿ, ಗಪ್ಪನೆ ಕೈಯಲ್ಲಿ ಹಿಡಿದು, ಟಬ್ಬಿನ ಹೊರಗೆಸೆದ. ಎಲ್ಲರೂ ನೋಡಿ, "ಅಯ್ಯಯ್ಯ, ಇದು ರಬ್ಬರಿನ ಹಾಂವಪ್ಪಾ...." ಎಂದು ಬೆರಗಾದರು.

ಕಾಲವು ಗತಿಸಿದಂತೆ ಹೆಣ್ಣುಮಕ್ಕಳಿಗೂ ಶಾಲೆಯ ಬಂಧನವು ಸುತ್ತಿತು. ಇವನಿಗೂ ಅವರಿಗೂ ಕೂಡಿಯೇ ಆಟಕ್ಕೆ ಬಿಡುವಿಲ್ಲ. ಆದಿತ್ಯವಾರಕ್ಕೊಮ್ಮೆಯಾದರೂ ಅವರೊಡನೆ ಆಡಬೇಕೆಂದರೆ ಗೆಳೆ-ಯರು ಬಂದು "ಗೋವಿಂದಾ, ವ್ಯಾಚಿಗೆ ಬಾ, ಕೇರಂ ಆಡೋಣ ನಡೆ...." ಹೀಗೆಂದು ಎಳೆದೊಯ್ಯಬೇಕು. ಏನೋ ತಿಂಗಳಿಗೊಮ್ಮೆ ಸಖಿಯರೊಡನೆ ಆಡ ಹೋದರೆ ಅವರ ತಾಯಿಯರೆಲ್ಲ, "ನಮ್ಮ ಮಕ್ಕಳನ್ನೆಲ್ಲ ಓದಬಿಡಿಸಿ ಆಟಕ್ಕೆ ಹಚ್ಚಿ ಧಡ್ಡಿಯರನ್ನ ಮಾಡ್ತಾನ ...." ಎಂದು ಆಡಿಕೊಳ್ಳಹತ್ತಿದರು; ಅದರ ಮೂಲಕ ಮೇಲಿಂದ-ಮೇಲೆ ಅವರಿಗೆಲ್ಲಾ ತಾಯಿಯ ಏಟು ಬೀಳತೊಡಗಿದವು.

ಹೀಗಾಗಿ ಅವನೂ ಮನೆಯೊಳಗೆ ಇರಲಿಕ್ಕೆ ಬೇಸತ್ತು, ಮುಂಜಾನೆ ಅಭ್ಯಾಸ, ಗರಡೀಸಾಧಕ ಮಾಡಬೇಕು, ಮಧ್ಯಾನ್ಹ ಶಾಲೆ. ಸಾಯಂ-ಕಾಲಕ್ಕೆ ಊಟಮಾಡಿ, ಮತ್ತೆ ಆಡಲಿಕ್ಕೆ ಬೈಲಿಗಾಗಲಿ, ಪೇಟೆಗಾಗಲಿ, ಅಡ್ಡಾಡಲಿಕ್ಕಾಗಲಿ ಹೋಗಬೇಕು. ಬಗೆಬಗೆಯ ಆಸನಗಳನ್ನೂ ಹಾಕಲಿಕ್ಕೆ ಕಲಿತನು. ಎಷ್ಟು ವ್ಯಾಯಾಮ ಮಾಡಿದರೂ, ಎಷ್ಟು ಸುಖವಾಗಿ ಊಟಮಾಡಿದರೂ ಮನೆಯವರ ಕಾಟಕ್ಕಾಗಿ ಹೊಟ್ಟೆಗೆ ಅನ್ನವು ಸುಖವಾಗಿ ಹತ್ತದಾಯಿತು. ಅಂತೂ ಅವನು ಇಂಗ್ಲೀಷು ಮೂರನೇ ಇಯತ್ತೆಗೆ ಹೋದನು.

ಒಂದು ದಿವಸ ಗೆಳೆಯರೊಡನೆ ಚಹ ಕುಡಿಯುತ್ತ ಕುಳಿತಿದ್ದನು. ಗೆಳೆಯರು ಆಗ್ರಹದಿಂದ ಗೋವಿಂದನ ಕಡೆಯಿಂದ ಆಸನಗಳನ್ನು ಹಾಕಹಚ್ಚಿದರು. "ಶಾಬಾಸ" ಎಂದು ಅವರು ಅನ್ನುತ್ತಿದ್ದುದನ್ನು ನೋಡಿ, "ಬಿಡ್ರೊ್ಯ, ಇದನ್ನೇನ ಹೇಳ್ತೀರಿ, ನಮ್ಮನೀ ಜನರೆಲ್ಲಾ, ನನಗ ಗೋವಿಂದರಾವ ಟೀಂಬೆ, ಎಡ್ಡಿಪೋಲೋ, ವೂಂಡೆಡ್ ಸೋಲ್ಜರ (Wounded Soldier) ಅಂತ ಹಿಂಗೆಷ್ಟೋ ಪದವಿ-ಗಳನ್ನ ಕೊಟ್ಟಾರ...."

ಅಷ್ಟರಲ್ಲಿ ವೂಂಡೆಡ್ ಸೋಲ್ಜರ ಎಂಬ ಬಿರುದಾವಳಿಯನ್ನು ಗೋವಿಂದನಿಗೆ ಕೊಟ್ಟ ಆತನ ಭಾವ ಸಹಜವಾಗಿ ಅಲ್ಲಿಗೆ ಬಂದು ಗೋವಿಂದನ ಮಾತನ್ನು ಕೇಳಿದನು. "ಗೋವಿಂದಾ, ನನಗ ಹ್ಯಾಂಗೂ ಈ ಟರ್ಮಿಗೆ ಬ್ಯಾರೇ ಊರಿಗೆ ವರ್ಗಾಗೇದ, ನನ್ನ ಸಂಗತೀನ ನಡಿಯೊ-ಇಲ್ಲೇ ಜನದ ಸಲುವಾಗೀನೊ ದನದ ಸಲುವಾಗೀನೊ ನಿನ್ನ ಅಭ್ಯಾಸ ಆಗೂದುಲ್ಲಾ ...." ಎಂದನು.

ಆಗ ಗೋವಿಂದನು ಯಾರಾದರೂ ಅಂದಿನಿಂದ ತನ್ನನ್ನು ಅಂದರೆ, ಆಡಿದರೆ "ಇನ್ನೇನು, ನಾ ಇಲ್ಲೆ ಇನ್ನೊಂದ ವಾರದ ತನಕಾ ಭಾಳಾದರ ಇರಾಂವಾ" ಎಂದು ನಗೆಯಾಡಹತ್ತಿದ; ತನ್ನ ಜೊತೆಗಾತಿಯರಿಗೆಲ್ಲ ಅಂಜಿಕೆಹಾಕಹತ್ತಿದ.

ಮರುವಾರ ಭಾವನೊಡನೆ ಹೋಗಿಬಿಟ್ಟನು. ಮನೆಯಲ್ಲಿ ಅವನ ಅಕ್ಕ, ಭಾವ, ಪುಟ್ಟ ಮಾಲಿಯೊಬ್ಬಳು-ಗೋವಿಂದನ ಪ್ರೀತಿಯ ಆಟದ ಗೆಳತಿಯು. ಅಲ್ಲಿಗೆ ಹೋದ ಬಳಿಕ ಅವನ ಆಯುಷ್ಯವೇ ಬೇರೆ ರೀತಿಯದಾಯಿತು. ಮುಂಜಾನೆ ಮಾಲಿಯೊಡನೆ ತಿರುಗಾಡಿ ಬರುವದು, ಚಹಾ ಫಲಾಹಾರ ತೀರಿಸುವಷ್ಟರಲ್ಲಿ, ಮನೆಯಲ್ಲಿ ಓದು ಹೇಳುವ ಮಾಸ್ತರರು ಬರುತ್ತಿದ್ದರು. ಬಳಿಕ ಸ್ನಾನ -ಊಟ ತೀರಿಸಿ ಶಾಲೆಗೆ ಪ್ರಯಾಣ. ಸಾಯಂಕಾಲಕ್ಕೆ ಫಲಾಹಾರ ತೀರಿಸಿ, ಬೇಕಾದರೆ ಕಾಲ್ನಡಿಗೆಯಿಂದ, ಬೇಕಾದರೆ ಗೆಳೆಯರೊಡನೆ ಸಾಯಕಲ್ಲ ಮೇಲೆ ತಿರುಗಾಟ. ಬೇಸರವಾದರೆ ಕೇರಮ್ಮು. ಮೊದಲು ಆತನನ್ನು ಅವನ ತಾಯಿಯ ಮನೆಯಲ್ಲಿ ನೋಡಿದ ಅವನ ಋಣಾನುಬಂಧಿಕರೊಬ್ಬರು, "ಏನೋ, ಗೋವಿಂದಾ, ಏನು ಅಪ್-ಟು-ಡೇಟ ಫ್ಯಾಶನ್ನಿಗಿಳಿದು ಬಿಟ್ಟೆಯಲ್ಲಾ ಇಷ್ಟರೊಳಗ- ?" ಎಂದು ಕೇಳಿ ಹೋದರು.

ಗೋವಿಂದನೀಗ ಒಳ್ಳೆಯ ಸಿರಿಯನ್ನು ಕಾಣುವನು. ಅಭ್ಯಾಸ-ದಿಂದಲೂ, ಅಚ್ಚುಕಟ್ಟುತನ—ನಿಯಮಿತತನಗಳಿಂದಲೂ ಅವನ ಮುಖದ ಮೇಲೆ ಒಳ್ಳೆಯ ಕಳೆಯು ಬಂದಿತು. ಕೇವಲ ಹದಿನಾಲ್ಕು ವರುಷದ ಹುಡುಗನಾಗಿದ್ದರೂ, ಇಪ್ಪತ್ತು ವರುಷದವನಂತೆ ಪುಷ್ಟನಾಗಿ ಕಂಡನು. ಮೊದಲೇ ಬೆಳ್ಳಗೆ ಬೀಸಾದ—ಕೆಂಪಾದ ಆಳು, ಮತ್ತೇನು ಕೇಳುವದು ?

ಮಹಾಶಿವರಾತ್ರಿಯು ಇನ್ನೂ ಎಂಟು ದಿವಸವಿದ್ದಿತು. ಗೋವಿಂದನಿಗೆ ನಡುಗುಜ್ವರಕ್ಕಾರಂಭವಾಯಿತು. ನಾಲ್ಕು ದಿನಗಳಲ್ಲಿ ಎರಡು ಇಂಜೆಕ್ಶನ್‌ಗಳಾದವು. ಔಷಧ ಉಪಚಾರಗಳಾದವು. ಮರುದಿನ ಅವನ ತಾಯಿಯಿಂದ ಭಾವನಿಗೊಂದು ಪತ್ರವು ಬಂದಿತು—ಶಿವ-ರಾತ್ರಿಯ ಶ್ರೀಸೋಮೇಶ್ವರನ ಜಾತ್ರೆಗೆ ಅಕ್ಕ—ತಮ್ಮಂದಿರನ್ನು ಕಳಿಸಬೇಕೆಂದು. ಆಗ ಗೋವಿಂದನು "ಅಕ್ಕಾ, ನಮ್ಮ ಊರಿಗೆ ಹೋಗೂ ಮುಂಚೆ ಈಗಿಂದೀಗ ನನ್ನದೊಂದು ಫೋಟೋ ತೆಗಿಸಿಡಿ—

ಮಾಲಿ ನಾನು ಕೂಡಿ ತೆಗಸೋಣೇನು ? ” ಎಂದು ಕೇಳಿದನು. “ ಯಾಕೋ ಇಷ್ಟವಸರ ? ನೀಯೇನು ತಿರುಗಿ ಬರೋದಽ ಇಲ್ಲ ? ಏನ ಕಡೆತನಕಾನೂ ಅಲ್ಲೇ ಉಳೀತೀಯಾ? ” ಎಂದು ಅಕ್ಕನೆಂದಳು.

ಶಿವರಾತ್ರಿಯ ದಿವಸ ಮುಂಜಾನೆಯೇ ತಮ್ಮೂರಿಗೆ ಬಂದರು. ಮಧ್ಯಾಹ್ನಕ್ಕೆ ಶ್ರೀ ಸೋಮೇಶ್ವರನಿಗೆಂದು ಹೋದರು. ದರ್ಶನ ಫಲಾಹಾರಗಳಾದವು. ಮಟ ಮಟ ಮಧ್ಯಾಹ್ನ. ದಿಬ್ಬದ ಮೇಲೆ ತಮ್ಮ ಬಂಡಿಯ ನೆರೆಯಲ್ಲಿದ್ದ ಬಂಡಿಯ ನೆರಳಿನಲ್ಲಿ, ಗೋವಿಂದನು ಅಡ್ಡಾಗಿದ್ದನು. ಅವರ ತಾಯಿ ಸ್ಟೋವನ್ನು ಹೊತ್ತಿಸಿ, ಚಹಾಕ್ಕೆಂದು ಎರಡು ಕೊಡದ ತಪ್ಪೇಲಿಯನ್ನಿಟ್ಟಳು. ಆಗ ಅಕ್ಕವ್ವನು, “ ಅವ್ವಾ, ಚಹಾ ಲಗೂನ ಮಾಡಿಳಸು, ಹೋಗೋ ಬರೋ ಮಂದೀದೆಲ್ಲಾ ಕಣ್ಣು ನಿನ್ನ ದೊಡ್ಡ ತಪ್ಪೇಲೀ ಮ್ಯಾಲೇ ಅದ ” ಎಂದಳು. ಚಹವಾಯಿತು. ಅಷ್ಟರಲ್ಲಿ ಇಳುಕಲಿನಲ್ಲಿ ಗುಡಿಯ ಎದುರಿಗೆ ಕೋಲಾಹಲದ ಕೂಗು ಕೇಳಿಸಿತು. ಯಾವುದೋ ಹುಡುಗ ಹೊಂಡ-ದಲ್ಲಿ ಬಿದ್ದಿದೆ ಎಂದಾರೋ ಒದರಿಕೊಂಡಂತಾಯಿತು. ಅಕ್ಕವ್ವನು “ ಗೋವಿಂದೆಲ್ಲಿದ್ದಾನ ನೋಡ್ರೆ ”! ಎಂದು ಚೀರಿದಳು.

ಆಗ ತಾಯಿಯು “ಅಕಾ ಅಲ್ಲೇ ಬಿದ್ದಾನ ನೋಡು ನಿನ್ನ ಗೋವಿಂದಾ, ಯಾಕ ಚೀರಿಕೋತೀದಿ........ ” ಎಂದುತ್ತರವಿತ್ತಳು. ಇತ್ತ ಆತ ಮಲಗಿದಲ್ಲಿದ್ದ ಚಕ್ಕಡಿಯೊಳಗೆ ಬಾಳೆಯ ಹಣ್ಣನ್ನು ಸುಲಿದು ತಿನ್ನುತ್ತ ಒಕ್ಕಲಿಗರ ಎಂಟು ಹತ್ತು ಹೆಣ್ಣುಮಕ್ಕಳು ಕುಳಿತಿದ್ದರು. ಯಾರೋ ಬಂದಿವರಿಗೊಂದೆರಡು ಅರಿವೆಗಳನ್ನು ತೋರಿಸಿದೊಡನೆ, “ ಅಯ್ಯಯ್ಯೋ, ನಾಮ್ಮದ್ರೇಯವ್ವಾ ಮಗಾ.... ” ಎಂದು ಚೀರುತ್ತಲೇ ಗೋವಿಂದನ ಇಬ್ಬದಿಗಳಿಂದಲೂ ಟಣ್ಣನೆ ಜಿಗಿದು ಭಾಂವಿಯ ಬಳಿ ಓಡಿದರು. ಗೋವಿಂದನು ಅವರ ಚೀತ್ಕಾರ-ವನ್ನು ಕೇಳಿ ಬೆಚ್ಚಿಬಿದ್ದು ನಿದ್ರೆಯೊಳಗಿಂದ ದಿಗ್ಗನೆದ್ದು ತಮ್ಮವ್ವನ ಬಳಿಗೆ ಬಂದು “ ಅವ್ವಾ, ನ್ಯೋಡುಲ್ಲಾ ನಡಗ ಹೆದರಿಕಿಯಾಗತದ, ”

ಎಂದನು. ಶಾಲು ಹೊಚ್ಚಿಕೊಂಡು ಮಲಗಿ ಮನೆಗೆ ಬಂದವನೇ ಹಾಸಿಗೆ ಹಿಡಿದನು. ಆ ಮೇಲೆ ಪ್ರಜ್ಞೆಯಿರುವಾಗಲೇ ಬಾಯಿಗೆ ಬಂದಂತೆ ಬಡಬಡಿಸಹತ್ತಿದನು: "ಅವ್ವಾ, ಅಲ್ಲಿ ನೋಡು, ಗಾಡಿ ನ್ಯಾಗ ಒಬ್ಬ ಕರೇ ಮನಶ್ಯಾ ನಿಂತಾನ, ಆ ಸೋಮೇಶ್ವರನ ಹೊಂಡ್ದಾಗ ಬಿದ್ದ ಹುಡುಗನ ಜೋಡೀ ನಾನಗೂ ತನ್ನ ಸಂಗತೀ ಬಾ ಅಂತ ನಿನ್ನೇ ಕರದಾ, ನಾ ಭಾಳ ಹೆದರಿದೆ, ಎಲೆ ಎಲೆ ಕರೇ-ಮನಶ್ಯಾ, ನಾಮ್ಮನೀ ಒಳಗೆರಡು ನಾಯಿಊ ಅವ, ನಿನ್ನ ಮ್ಯಾಲೆ ಛೂ ಬಿಟ್ಟೇನ್ನೋಡು....ಕೈಯೊಳಗ ಆರತೀ ತಂದು, ನಾನಗ್ಯಾಕ ಬೆಳಗತೀರೋ ? ನಾನ್ನ ಮುಂದ ಗ್ಯಾಸಬತ್ತೀ ಯಾಕ ಬೆಳಗತೀರೋ ?............ಏ ಅಕ್ಕಾ, ನಾನ್ನ ಮೇವಿನೊಳಗ ಮಲಗ ಸ್ತಾರಂತ ನೋಡ ಇವರು........... "

ಆಗ ತಾಯಿ-ಅಕ್ಕಂದಿರು, "ಅಯ್ಯೋ ನಾನ್ನಪ್ಪಾ, ನಿನಗೇ-ನಾತೂ ....... ರಾಮ, ರಾಮ, ಅನ್ನಪ್ಪಾ, ಹುಶಾರಾಗು........" ಎಂದು ದುಃಖಿಸಿ ಹೇಳಿದರು. ಆಗವನು, "ನಾನಗೇನಾಗೇದ್ರೇ, ಕರೇ ಮನಶ್ಯಾನ ನೋಡು, ಆಕಾಶ-ಭೂಮಿಗೆ ಒಂದಾಗಿ ನಿಂತಾನ, ಕಿರೀಟಾ ಹಾಕ್ಯಾನ, ನಾನಗ ಬಾ ಅಂತ ಜೋರು ಮಾಡ್ತಾನ........ ಲೇ ಕಳ್ಳಾ, ನಾನ್ನ ಪರೀಕ್ಷಾ ಹತ್ರ ಬಂದದೋ, ನಾ ಈ ಸಾರೆ ಅಭ್ಯಾಸಾ ಭಾಳ ಛಲೋ ಮಾಡೇನೀ........ ಏನಂತೀ, ನೀ ಏನ ಮಾಡಿದ್ರೂ ಕೇಳಾಂವಲ್ಲ !........ ಬಿಡಪಾ ಹಾಂಗಾದ್ರ, ಮುಂದಿನ ಸೋಮವಾರ ಖರೇ ಅಂದ್ರ ಬರ್ತೇನಿ, ನನ್ನ ವಚನಾ ತಗೋ........"

ಹೀಗೆಯೇ ನಡುಗುತ್ತ ಪ್ರಜ್ಞೆಯಿಲ್ಲದೆ ಮರುದಿನ ಸೋಮವಾರ ನಡುರಾತ್ರಿಯ ವರೆಗೆ, ಅವನ ಬಳಗವು ಕಣ್ಣೀರೊಡನೆ ಹಾಕಿದ ತೀರ್ಥ-ಔಷಧಗಳನ್ನು ಕುಡಿಯುತ್ತ ಬಿದ್ದಿದ್ದನು. ರಾತ್ರಿಯ ಒಂದರ ಸುಮಾರಿಗೆ ಆ ನಿರ್ದಯ ಕರಾಳರೂಪನು ಅವನ ಪ್ರಾಣವನ್ನು ಹೀರಿ ಯೊಯ್ದನು. ಬಳಗವೆಲ್ಲವೂ ಹೌಹಾರಿ ಹಲುಬಿತು.... ಬೋರಾಡಿತು....



# ದಾಜೀಬಾನ ಬ್ಯಾಂಕು

ದಾಜೀಬಾನು ನಮ್ಮ ನಂಬಿಗಸ್ತ ಆಳು. ನಮ್ಮ ಮಾವಂದಿರು ವಕೀಲಿ ಮಾಡಲಾರಂಭಿಸಿದಾಗಲೇ ದಾಜೀಬಾನು ನಮ್ಮ ಮನೆಯ ಊಳಿಗತನವನ್ನು ವಹಿಸಿದ್ದನಂತೆ. ನಮ್ಮ ಮಾವಂದಿರು ತೀರಿಹೋದ ಮೇಲೆ ಈಗಿನ ದಿನಮಾನಕ್ಕನುಸರಿಸಿ, ನಮ್ಮ ಮನೆಯವರೇ ಮಾವಂದಿರ ಪಟ್ಟವನ್ನೇರಿದ್ದಾರೆ. ಹಳೆಯ ವಕೀಲರ ಬದಲಾಗಿ, ಗಾದಿಯ ಮೇಲೆ ಹೊಸ ವಕೀಲರು ಬಂದರು; ಆದರೆ ಹೊಸ ಆಳು ಬರಲಿಲ್ಲ. ಹೊಸ ಹುರುಪಿನಿಂದ ದಾಜೀಬಾನೇ ನಮ್ಮವರ ಸೇವೆ ಮಾಡುತ್ತಿದ್ದಾನೆ. ದಾಜೀಬಾನಿಗೆ ಈಗ ಏನಿಲ್ಲೆಂದರೂ ನಾಲ್ವತ್ತೈದು ಮೀರಿರಬೇಕು. ಆದರೂ ಎಂತಹ ಗಟ್ಟಿಮುಟ್ಟ ಆಳು! "ದಾಜೀಬಾ, ನಿನ್ನಿಂದ ಈ ಕೆಲಸವಾಗುವದೇನು, ಆ ಕೆಲಸವಾಗುವದೇನು?" ಎಂದು ನಾನು ಕೇಳಿದರೆ 'ಅಯ್ಯೋ ಬಾಯಾರ, ಆಗದೇನ ಮಾಡತೈತ್ರೀ ? ನಮ್ಮ ಸಣ್ಣ ಧಣ್ಯಾರ್ನ ಎತ್ತಿ ಆಡಿಸಿದಾವಾ ನಾನು!!" ಎನ್ನುತ್ತಾನೆ. ಅವನ ಮಾತಿನ ಅರ್ಥವೇನು ಮಾಡಲಿ? ಅವನ ಸಣ್ಣ ಧಣಿಯರು ಅಷ್ಟು ಭಾರವಾಗಿದ್ದರೆಂದೋ ಅಥವಾ ಅಷ್ಟು ದಿನಗಳಿಂದ ತಾನು ನಮ್ಮ ಮನೆಯ ಕೆಲಸದಲ್ಲಿ ನುರಿತಿದ್ದನೆಂದೋ?

ಅವನ ಸಣ್ಣ ಧಣಿಯರು ಹುಟ್ಟುವ ಮೊದಲು ಎರಡು ವರ್ಷ ನಮ್ಮಲ್ಲಿ ಚಾಕರಿಗೆ ನಿಂತಿದ್ದನೆಂದು ದಾಜೀಬಾನು ಹೇಳುತ್ತಿರುತ್ತಾನೆ; ಸುಮಾರು ಮೂವತ್ತು ವರುಷಗಳಾಗಿರಬೇಕು ಅವನ ಲೆಕ್ಕದ ಪ್ರಕಾರ. ನಮ್ಮ ಮಾವಂದಿರಿದ್ದಾಗ ದಾಜೀಬಾನಿಗೆ ಸಂಬಳ ಕೊಡುವವರು ಅವರು. ಆದರೆ ಈಗಿನ ಹೊಸ ಪದ್ಧತಿಗನುಸರಿಸಿ, ತಂದುಬಂದು ಹಾಕುವದಷ್ಟು ನಮ್ಮವರ ಕೆಲಸ; ಅದನ್ನು ಯೋಗ್ಯರೀತಿಯಲ್ಲಿ ವೆಚ್ಚಮಾಡುವದು, ಉಳಿಸುವದು, ಲೆಕ್ಕಹಚ್ಚಿಟ್ಟು ತಿಂಗಳಿಗೊಮ್ಮೆ ನೋಡುವದು, ಎಲ್ಲದರ ಭಾರವು ಸಂಪೂರ್ಣವಾಗಿ ನನ್ನ ಮೇಲೆ.

ಎಂದರೆ ದಾಜೀಬಾನ ಮಂಗಳವಾರದ ಪಗಾರವನ್ನು ಪೂರೈಸುವದೂ ನನಗೊಪ್ಪಿದ್ದಿತು. ಈ ಕೆಲಸವು ನನ್ನಡೆಗೆ ಬಂದು ಈಗ ಏಳೆಂಟು ವರುಷಗಳಾಗಿರಬೇಕು.

ಮಾವನವರಿದ್ದಾಗ ನಾಲ್ಕಾರು ಬಾರಿ ದಾಜೀಬಾನ ತಾಯಿ-ಹೆಂಡತಿಯರು ಬಂದು—

"ರಾಯರ, ದಾಜೀ ಮನೀಯೊಳಗ ಖರ್ಚಿಗೇನs ಕೊಡೂದಿಲ್ರೀ. ಒಂದು ವಾರಾ ಜ್ವಾಳಾ ತರತಾನ್ರೀ. ಮರುವಾರಾ ಅಕ್ಕೀ ತರತಾನ್ರೀ. ಮತ್ತ ಜ್ವಾಳಾ ಯಾಕ ತರ್ಲಿಲ್ಲಾ ಅಂದ್ರ, 'ಹ್ವಾದ ವಾರ ತಂದಿದ್ನೆಲ್ಲಾ!' ಅಂತಾನ್ರೀಯಪ್ಪಾ. ತಿಂದದ್ದ ಅಂವಗ ನೆಂಪs ಇರೂದಿಲ್ರೀ........ ಅಟ ಬುದ್ಧೀ ಹೇಳ್ರೀ ರಾವಸಾಬ್ರ. "

" ಏನೋ ದಾಜೀಬಾ? "

" ಸಾಹೇಬ? "

" ಪಗಾರೇನಾತೂ? "

" ಕಡ್ಡಿಪೆಟಗಿ ಚುಟ್ಟಾದಾಂವಗ ಒಂದೆಂಟಾಣೆ ಕೊಟ್ಟೆನ್ರೀ, ಅಂಗೀ ಹೊಲದಾಂವಗ ಎಂಟಾಣೆನ್ರೀ, ಒಂದ ರೂಪಾಯದಾಗ ಸಂತೀ ಮಾಡೇನ್ರೀ. "

" ಮತ್ತಿನ್ನೊಂದ ರೂಪಾಯಿ ಏನಾತೋ? "

" ಸಾಹೇಬ, ಅದೊಂದ ಬ್ಯಾಂಕಿನಾಗ ಇಟ್ಟೆ ಬಂದಿನ್ರೀ. ಮತ್ತ ನಾಳೆ ನನ್ನ ಕೈ ಕಟ್ಟ್ಯಾತಂದ್ರ ಎಲ್ಲಾರೂ ಹೊಟ್ಟೆಗೇನ ಕೇರ ಹಾಕ್ಕೊಂತಾರಂತೇರ್ರಿ ಉಪಾಸಾ ಮಾಡಿ? ತನ್ನ ಹಂತೇಕ ಇಲ್ದಿದ್ರ ಮೂರು ಲೋಕಾದಾಗ ಇಲ್ಲಂತ........... " ಹೀಗೆಯೇ ಹೇಳುತ್ತಿರ-ಬೇಕಂತೆ.

ನಾನು ಸಂಬಳ ಕೊಡಹತ್ತಿದಾಗಿನಿಂದಲೂ ಇದೇ ಪ್ರಕಾರವೇ ನಡೆದಿದ್ದಿತು. ಅಲ್ಲದೆ ಆವನಲ್ಲಿ ಇನ್ನೊಂದು ವಿಶೇಷಗುಣವಿದ್ದಿತು.

ಮಂಗಳವಾರ ಮಧ್ಯಾಹ್ನಕ್ಕೆ ಸಂಬಳವು ಕೈಯಲ್ಲಿ ಬಿದ್ದಿತೆಂದರೆ ತೀರಿತು, ಬುಧವಾರ ಸಾಯಂಕಾಲದ ವರೆಗೆ ವೈನೋವಿನ ನಿಮಿತ್ತ ಹೇಳಿ ಕಳುಹಿಸಿ ನಮ್ಮ ಮನೆಯ ಕಡೆಗೆ ಹಣಿಕಿಹಾಕುತ್ತಿದ್ದಿಲ್ಲ. ಈ ಮಾತು ಸಹ ನಮ್ಮ ಮಾವಂದಿರ ಜೀವಮಾನದಿಂದ ನಡೆದು ಬಂದ ಮಾತೇ ಆಗಿತ್ತು. ಈ ಬಗ್ಗೆ ನನಗೆ ತಡೆದೂ ತಡೆದೂ ಸೋಜಿಗ ಶಂಕೆಗಳುಂಟಾಗುತ್ತಿದ್ದವು; ತಿಳಿದುಕೊಳ್ಳಬೇಕೆಂಬ ಲವಲವಿಕೆಯೂ ಆಯಿತು.

ಉಳಿದ ಆಳುಗಳಂತೆ ನಮ್ಮ ದಾಜೀಬಾನು ಮನಸಿನಲ್ಲಿ ಸಿಟ್ಟು ಹಿಡಿಯುವವನಲ್ಲ, ಎಷ್ಟು ಅಂದರೂ ಆಡಿದರೂ ನಗೆಮುಖದಿಂದಲೇ ಇರುವಷ್ಟು ಅವನ ಸ್ವಭಾವ ಒಳ್ಳೆಯದು; ದಾಜೀಬಾನು ನಮ್ಮ ಪುಟ್ಟ ಮುರಲೀಧರನನ್ನು ಒಳ್ಳೆಯ ಪ್ರೀತಿಯಿಂದ ಆಡಿಸುತ್ತಾನೆ. ಮಗುವನ್ನಾಡಿಸುವಾಗ ಅವನನ್ನು ನೋಡಿದರೆ, ಅವನು ಕೆಲಸಕ್ಕೆ ತಪ್ಪಿಸಿದಾಗಿನ, ಕೆಲಸಗಳನ್ನು ಕೆಡಿಸಿದಾಗಿನ ಸಿಟ್ಟು ಒಮ್ಮೆಲೇ ಇಳಿದು ಬಿಡುವದು; ದಾಜೀಬಾನಂತಹ—ಮಕ್ಕಳನ್ನು ಹೆತ್ತ ತಾಯಿಯಂತೆ ಆಡಿಸುವ ಆಳುಮಕ್ಕಳು ಸಿಕ್ಕುವದು ದುರ್ಲಭವೆನಿಸುವದು. ಹೀಗೆ ನಮ್ಮವರ ಮುಂದೆ ಆಡಿ ತೋರಿಸಿದರೆ, ಅವರು ಕೂಡಲೆ ಸಿಟ್ಟಾಗಿ "ನಿನಗೇನ ತಿಳೀತದ ? ಪ್ರತಿ ಮಂಗಳವಾರ ಮಧ್ಯಾಹ್ನದಿಂದ ಬುಧವಾರ ರಾತ್ರೀತನಕಾ ನನ್ನ ಆಫೀಸಿನೊಳಗ ಕಾಲಿಟ್ಟು ನೋಡು, ಕಸಾ ಎಷ್ಟ ಬಿದ್ದಿರತದಂತ!" ಎನ್ನುವರು.

"ಪ್ರತಿಮಂಗಳವಾರಕ್ಕ ಯಾಕ ತಪ್ಪಸ್ತೀಪಾ ದಾಜೀಬಾ?"

"ಬಾಯಿ, ಬ್ಯಾಂಕಿನ ಕಡಿಕೇ ಹೋಗಬೇಕಾಗತೈತ್ರಿ........"

"ಯಾವ ಬ್ಯಾಂಕೋ ?"

"ಅಲ್ಲೈತೆಲ್ರೀ ಹುಬ್ಬಳ್ಳ್ಯಾಗ, ಅದ್ಯಾವದೋ ಅರಬ್ಬನ್ ಬ್ಯಾಂಕಂತ ಅಂತಾರೆಲ್ರೆವ್ವಾ—ಅದs ನೋಡ್ರಿ."

" ಅಲ್ಲೆ ನಿನ್ನ ಠೇವು ಈಗೆಷ್ಟಾಗಿರಬಹುದಪಾ ? "

" ನೀವs ನೋಡ್ರೆಲ್ರಿ ಲೆಕ್ಕಾ ಹಾಕಿ—ನಾ ನಿಮ್ಮನ್ಯಾಗ ಚಾಕ್ರೀ ಮಾಡಾಕ್ಹತ್ತೇ ಈಗ ನೋಡ್ರೆವ್ವಾ ಮೂವತ್ತು ವರ್ಸಾಗಾಕ ಬಂತೂ—ಚಾಕ್ರೀ ಮಾಡಾಕ್ಹತ್ತೀದ ಯಾಡ್ಡ ವರ್ಸಕ ಸುರು ಮಾಡೀನ್ನೋಡ್ರಿ........ ವಾರಾ ಒಂದ ರೂಪಾಯದಂತ ಇಟಗೊಂತ ಬಂದೀನ್ರಿ........ ಆ ಸೂಳೀಮಕ್ಕಳೀಸ ನಾನ್ನ ಹಣಾ ಪರತ ಮಾಡ-ತಾರ್ರೀಯವ್ವಾ ! "

" ಅರ್ಬನ್ ಬ್ಯಾಂಕಂತೀದೆಲ್ಲೋ ಮತ್ತ, ಪರತ ಬಾರದ ಏನ ಮಾಡತದ ? "

" ಹೌದೆಲ್ಲಾ ಕರೀವ್ರೀ, ಆದ್ರ ಒಂದ ವ್ಯಾಳ್ಯೀಕ, ಬಗಾನ ಮುಣಗಿಗಿಣಗಿ ಹ್ವಾದರರೀ ? "

" ಅದೆಲ್ಲಾ ಇರ್ಲಿಪಾ, ನೀನು ಹುಬ್ಬಳ್ಳಿಗೆ ಹೋಗಿ ಬರೂದು ಮಂಗಳವಾರ ಮಧ್ಯಾಹ್ನಕ್ಕ. ಮತ್ತ ಬುಧವಾರ ಮಧ್ಯಾಹ್ನದ ತನಕಾ ಕೆಲಸಕ್ಕ ಯಾಕ ಬರೂದುಲ್ಲಪಾ ? ತಪ್ಪಿಸೇ ಬಿಡತೀದೆಲ್ಲಾ ? "

" ಮತ್ತೇನ ಮಾಡ್ಲಿರೀ ? ಮಂಗಳಾರ ದಿನಾ ಮದ್ಯಾಣಕ ಪಗಾರಾ ಇಸಗೊಂಡಕ್ಯಾರಾ ಹುಬ್ಬಳ್ಳಿಗೆ ಹೊಕ್ಕೇನ್ರೀ. ಮುಂದಾಲ್ಲಿಂದ ನಡಕೊಂಡಕ್ಯಾರs ಅಟ ಚಾಳಿ—ಗಿಳಿ ಕುಡದು ಬ್ಯಾಂಕಿಗೆ ಹೋಕ್ಕೇನಿ. ಅಲ್ಲೀಟ ಒಂದ ರೂಪಾಯಿ ಇಟ್ಟಕ್ಯಾರಾ ಗೆಣ್ಯಾನ ಮನೀಗೆ ಹೋಗತೇನಿ. ರಾತರನ್ಯಾಗೆಲ್ಲೆ ಬರೂದಂತ, ಅಲ್ಲೇ ಉಳದ ಬಿಡ್ತೇನಿ. ದೊಡ್ಡ ನಸಿಕಿನ್ಯಾಗ ಎದ್ದ ಹೋಂಡಾಕ ನಿಂತ್ರ ಆ ಗೆಣ್ಯಾ ಒಂದ ಕೇಳಬೇಕಲ್ರಿ ? ಮತ್ತ ಅವನ ಜುಲುಮಿಗೆ ಅಟ ಉಂಡಕ್ಯಾರಾ ಬರೂಮಟಾ ಮದ್ಯಾಣಾನs ಆಗತೈತ್ರಿ. "

" ಅಂತೂ ಇವೊತ್ತಿನ ವರೆಗೆಂದ್ರ ವರ್ಷಕ್ಕ ಐವತ್ತರಂತ ಹಿಡಮ್ರೂ ಸುದ್ದಾ, ಸುಮಾರು ಒಂದೂವರಿ ಸಾವಿರ ನಗದ ಮಾಡೀಯನ್ನಪಾ. "

" ಅದೇನ ಮಾಡಾಣ ಬಿಡ್ರೀಯವ್ವಾ ! "

" ಪತ್ತ ಮ್ಯಾಲೀ ಮಾತ್ಯಾಕೋ ? "

ಹಾ ಎಂದು ನಿಟ್ಟುಸಿರುಹಾಕಿ ಎದ್ದು ಹೋಗುತ್ತಿದ್ದನು.

ಒಂದೂವರೆ ಸಾವಿರವೆಂದರೆ ಇವನಿಗೆ ಇನ್ನೂ ಅತೃಪ್ತಿಯೆ ? ಎಂತೆಂತಹ ಆಫೀಸರರು ಕೈಯಲ್ಲಿದ್ದಾಗ ಸುಖಬಟ್ಟು ಪೆನ್ಶನ್ನಿಗೆ ಬಂದಕೂಡಲೆ ಗಳಿಕೆಯ ವಿಚಾರ ಬಿಟ್ಟು ಉಳಿಕೆಯ ವಿಚಾರ ಮಾಡಿದಾಗ ಕೈಯಲ್ಲಿ ಏನೂ ಇಲ್ಲವೆಂದು ವ್ಯಸನಪಡುತ್ತಿರುವಲ್ಲಿ, ಇವನಿಗೆ ಒಂದೂವರೆ ಸಾವಿರವೆಂದರೆ ನಿರುತ್ಸಾಹದ—ಅಸಮಾಧಾನದ ನಿಟ್ಟುಸಿರೇಕೆ ?

ಒಂದು ಮಂಗಳವಾರ; ಮಧ್ಯಾಹ್ನಕ್ಕೆ ದಾಜೀಬಾನ ಚಿಕ್ಕ ಮಗಳು ನಮ್ಮ ಮನೆಗೆ ಬಂದಿದ್ದಳು. ನಾನವಳಿಗೆ ಕೇಳಿದೆ. " ಏನವ್ವಾ, ನಿಮ್ಮಪ್ಪ ಏನು ಹುಬ್ಬಳ್ಳಿಗೆ ಹೋಗ್ಯಾನs ? " ಆಗವಳು " ಇಲ್ರೀ, ಮನ್ಯಾಗನ ಮನಗ್ಯಾನರೀ ಮೈನೋವೆದ್ದೈತೆಂತ........ " ಏಕೋ ಮುದುಕ ಮನುಷ್ಯ, ಇರಬಹುದೆಂದೆ. ಬುಧವಾರ ಮಧ್ಯಾಹ್ನದ ವರೆಗೂ ಬರಲಿಲ್ಲ—ಮಧ್ಯಾಹ್ನಕ್ಕೆ ಬಂದನು. ಆಗ ಕೇಳಿದೆ:

" ಏನಪ್ಪಾ, ಮೈನೋವೆದ್ದಿತ್ತs?

" ಹೌದರೀ................ " ಎಂದು ಮೈಮ್ಯಾಲೆ ಕೈಯಾಡಿಸಿಕೊಂಡನು.

ಸಾಯಂಕಾಲಕ್ಕೆ ಆತನ ಹೆಂಡತಿ ಬಂದಳು.

" ಮೈಮ್ಯಾಲೆ, ಆರಿವಿ ಚಿಂದಿಚಿಂದ್ಯಾಗ್ಯಾವ್ರಿಯವ್ವಾ, ನಿಮ್ಮ ಮಾವನಾರೂ ಹೇಳಿ ಹೇಳಿ ಬ್ಯಾಸತ್ತಕ್ಯಾರಾ ಸತ್ತ ಸ್ವರ್ಗಕ ಹ್ವಾದರ್ರೀ. ಇನ್ನಾರs ನಾವ್ಮ್ಯಾಂವಗ ಬಿಡನ್ರಿ "

" ಏನವ್ವಾ ಅದು ಬಿಡಲಿಕ್ಕೆ ಹೇಳಬೇಕಾದ್ದೂ, ಭೀಮವ್ವಾ? "

" ಅಯ್ಯ, ನಿಮಗ ಗೊಂತ ಇಲ್ಲೇನs ಸನ್ನ ಹಡದವ್ವಾ,........ ಕುಡಿಯೂದ್ರೀ ? ನಿಮಗ ಗೊತ್ತಿದ್ದೀತಂತ ಮಾಡಿದ್ನಿ ಬಿಡ್ರಿ ಹಾಂಗಾರ, ನಾ. "

" ಛೀ ನನ್ನವ್ವಾ, ನನಗ ಗೊತ್ತಿಲ್ಲ ಬಿಡು. "

" ದರಾ ಮಂಗಳವಾರಾ ಇದ್ದವ್ದನ್ರೀ. ತಮ್ಮೆದುರಿಗೆ, ರಾವಸಾಬ್ರೆದುರಿಗೆ ಶಿರೆ ಕುಡದ ಬರಾಕ ನಾಚಿಗೊಂಡು, ಪ್ಯೆನೋಪೆ-ದ್ದಿರತೈತೆಂತ ಮನ್ಯಾಗ ಬಿದ್ದಿರತಾನ್ರೀ, ಬುಧವಾರಾ ಮಧ್ಯಾನ್ಹ ತನಕಾ !! "

" ಓಹೋ, ಮತ್ತ ಮಂಗಳವಾರಕ್ಕೊಂದ್ರೂಪಾಯದಂತ ಹುಬ್ಬಳ್ಳೀ ಒಳಗ ಠೇವಿಡತಾನಂತಲ್ಲಾ, ಅದರ ಸಲುವಾಗೀನ ಹುಬ್ಬಳ್ಳಿಗೆ ಹೋಗಿರತೇನಿ ಅಂತ ನಾನ್ನ ಮುಂದ ಹೇಳಿದಾ. ಹಾಂಗಾರ ಠೇವಿಡೋದರs ಖರೇನೋ ಸುಳ್ಳೋ ? "

" ಐ ಕೋಡಿ, ಅದೇನ ಇಡತೈತ್ರೀ ಬಾಯಾರ ? ಮಕ್ಕಳೂ ಮೊಮ್ಮಕ್ಕಳೂ ಕಂಡ್ರೂ ಸಂಕಾ ಕುಡ್ಯಾಣ ಬಿಡುದಾಗವಲ್ಲೊ...."

ಆಗ ನನಗೆಲ್ಲವೂ ಹೊಳೆಯಿತು; ನನ್ನ ಸಮಸ್ಯೆ ಬಗೆಹರಿಯಿತು. ದಾಜೀಬಾನಿಗೆ ನಾನು, ಒಂದೂವರೆ ಸಾವಿರ ರಕಮನ್ನು ಕೂಡಿಸಿರ-ಬಹುದೆಂದಾಗ ಆತ ಹಾಕಿದ ನಿಟ್ಟುಸಿರಿನ ಅರ್ಥವು ಈಗ ನನಗಾ-ಯಿತು; ಆತನ ಗುಟ್ಟು ರಟ್ಟಾಯಿತು; ಆತನ ಹುಬ್ಬಳ್ಳಿಯ ಸಮಾಚಾರವೆಲ್ಲವೂ ಸುಳ್ಳೆಂದು ಮನವರಿಕೆಯಾಯಿತು. ಈ ವರೆಗೆ ಆವನು ವಾರಕ್ಕೊಂದು ರೂಪಾಯಿಯಂತೆ ಡಿಪಾಝಿಟ್ಟನ್ನು ಇಡುತ್ತ ಬಂದದ್ದು ಹುಬ್ಬಳ್ಳಿಯ ಅರ್ಬನ್ ಬ್ಯಾಂಕಿನಲ್ಲಿ ಠೇವಿಗಾಗಿ ಅಲ್ಲ, ಆದರೆ ನಮ್ಮೂರ ಕಾಶೀಮಖಾನನ ಬ್ಯಾಂಕಿನಲ್ಲಿ ತೀರ್ಥ ಕುಡಿಯು-ವದರ ಸಲುವಾಗಿ !! 'ಕೆಲಸ ಸಿಕ್ಕ ಯಾಡ್ ವರ್ಸಕ್ಕ ಸುರೂ ಮಾಡೆನ್ರಿ ....' ಎಂಬ ಮಾತಿನ ಪೂರ್ಣ ಅರ್ಥವೂ ನನಗಾಗ ಆಯಿತು.

ಅಂದಿನಿಂದ ಅವನ ಪಗಾರದ ಮೂರು ರೂ.ಯಲ್ಲಿ ನಾಲ್ಕಾಣೆಮಾತ್ರ ಅವನ ಕೈಯಲ್ಲಿಟ್ಟು, ಉಳಿದುದನ್ನು ಅವನ ಮನೆಗೆ ಕಳುಹಿಸುತ್ತಿರುವೆನು. ಒಂದೊಂದು ವಾರ ಒಂದಾಣೆ, ಒಂದೊಂದು ವಾರ ಎರಡಾಣೆಯನ್ನೂ ಕೊಡುವೆನು. ಎಷ್ಟು ಬೈದರೂ, ಆಡಿದರೂ ಸಹನಶೀಲತೆಯಿಂದ ತನ್ನ ತಪ್ಪನ್ನು ಒಪ್ಪಿಕೊಳ್ಳುವನು. ಮೊದಲಿನಂತೆ ದೊಡ್ಡ ರಕಮನ್ನು ಪ್ರತಿವಾರವೂ ಇಡದೆ, ಈಗ ನನ್ನ ಬುದ್ಧಿಯ ಮಾತನ್ನು ಮನ್ನಿಸಿ, ಯಾವಾಗಲಾದರೊಮ್ಮೆ, ಎರಡಾಣೆ-ನಾಲ್ಕಾಣೆ ಮಾತ್ರ ಕೇವನ್ನಿಡುತ್ತಲೂ, ತಿಂಗಳಲ್ಲಿ ಒಂದೆರಡು ಬಾರಿ ಮಾತ್ರ ಪೈಸೋಯಿಸಿಕೊಳ್ಳುತ್ತಲೂ ಇರುತ್ತಾನೆ. ಅಷ್ಟು ಹಣವನ್ನು ಸಹ ಅವನಿಗೆ ಕೊಡದೇ ಹೋದರೆ, ನನಗೆ ಅವನಂಥಾ ನಂಬಿಗಸ್ತ ಆಳು ಮತ್ತೆಲ್ಲಿ ಸಿಕ್ಕಾನು ?

ಎಂದಾದರೊಮ್ಮೆ, "ದಾಜೀಬಾ, ಏನಂತಾನ ನಿಮ್ಮ ಬ್ಯಾಂಕಿನ ಮ್ಯಾನೇಜರ ?" ಎಂದು ನಗೆಯಾಡಿದರೆ,

"ಅಂವಾ ಏನಂತಾನ್ರೀ ? ನಾಯೇನರ ಅಂದ್ರ ಅಂವಾ ಏನರ ಅಂದಾನೂ...."

ಎಷ್ಟು ಸೌಮ್ಯವಾದ—ಸರಳವಾದ ಉತ್ತರ !!



# ದೊಡ್ಡಮ್ಮ ನೋಡಿದ ವರ

" ಸರೋಜಾ, ಮೊನ್ನೆ ನಿನ್ನ ನೋಡ್ಲಿಕ್ಕೆ ಬಂದಿದ್ದಿಲ್ವೇ, ಅವರದು ನಿನ್ನೆಯೇ ಸಾಯಂಕಾಲ ಒಂದು ಕಾಗದ ಬಂದಿದೆ ನೋಡು. ಹುಡುಗನ ಫೋಟೋ ನಾಳೆ-ನಾಡಿದ್ದು ಇಷ್ಟರಲ್ಲಿಯೇ ಕಳಿಸಿಕೊಡ-ತಾರಂತೆ. "

" ಹೋಗಮ್ಮಾ, ನನಗೀಗ ಸ್ಕೂಲಿಗೆ ಹೊತ್ತಾಗುತ್ತೆ, ಅದೆಲ್ಲ ನಿನ್ನ ರಗಳೆ ನಾನೆಲ್ಲಿ ಕೇಳುತ್ತ ಕೂಡಲಮ್ಮಾ ? " ಎನ್ನುತ್ತ ಸರೋಜಳು ತನ್ನ ರೂಮಿನೊಳಕ್ಕೆ ಹೊಕ್ಕು ಪುಸ್ತಕಗಳನ್ನು ಕೈಯಲ್ಲಿ ತೆಗೆದುಕೊಂಡು ಹೊರಗೆ ಬಂದಳು.

" ರಗಳೆಯೆಂದ್ರೆ ಹ್ಯಾಗೆ ನಡೆದೀತಮ್ಮಾ ? ಇನ್ನೇನು, ನೀನು ಐಶ್ವರ್ಯವಂತನ ಕೈಹಿಡಿಯುವಾಕೆ. ಅವರಲ್ಲಿ ಹೋದಮೇಲೆ ನೀನು ದೊಡ್ಡಮ್ಮನೆಂದು ನನ್ನ ನೆನಪನ್ನಾದರೂ ಮಾಡ್ತೀಯೋ ಇಲ್ಲವೋ ? ಸರೋಜ, ಸರೋಜ, ಮಾತನ್ನೇಕೆ ಆಡುತ್ತಿಲ್ಲವೇ ಕಳ್ಳೀ, ನಾಚಿಕೆಯಾಗುತ್ತೇನೋ, ಹೌದೇ ? ನಿಜ, ನನಗೆ ಕೂಡ ನಿನ್ನಷ್ಟಿರುವಾಗ ವಿಪರೀತ ನಾಚಿಕೆಯಾಗುತ್ತಿತ್ತಮ್ಮಾ......." ಎನ್ನುತ್ತ ಸುಂದ-ರಮ್ಮ ಸಗಣಿ ಕೈಯನ್ನು ಹಾಗೆಯೇ ಹಿಡಿದುಕೊಂಡು ಹೊರಗೆ ಬಂದರು; ನೊಡುತ್ತಾರೆ, ಸರೋಜನ ಕೋಣೆಗೆ ಬೀಗ ಹಾಕಿದ್ದಿತು; ಸರೋಜಳು ಯಾವಾಗಲೋ ಹೋಗಿರಬೇಕೆನ್ನಿಸಿತು.

ಬೇಗ ಬೇಗ ಕೆಲಸ ತೀರಿಸಿಕೊಂಡು ಮುಂಬಾಗಿಲು ಇಕ್ಕಿ-ಕೊಂಡರು; ತಮ್ಮ ಟ್ರಂಕಿನೊಳಗಿಂದ ಪತ್ರವೊಂದನ್ನು ತೆಗೆದರು. ಅದು ಬಂದು ಈಗೆರಡು ದಿನಗಳಾಗಿದ್ದರೂ ಸುಂದರಮ್ಮನಿಗೆ ನಿರಾ-ತಂಕವಾಗಿ ಓದಲಿಕ್ಕೆ ಅನುಕೂಲ ಸಮಯ ಸಿಗದ್ದರಿಂದ ಹಾಗೇ ಬಿಟ್ಟಿದ್ದರು. ಈಗವರು ಅದನ್ನು ಓದತೊಡಗಿದರು.

ಬೆಂಗಳೂರು ನಗರ. ಸಾಮಾನ್ಯವಾದದ್ದೊಂದು ಮನೆ. ಸುಂದರಮ್ಮ ತನ್ನ ತಂಗಿಯ ಪರದೇಶಿ ಮಗಳಾದ ಸರೋಜಳೊಡನೆ ಆ ಮನೆಯಲ್ಲಿದ್ದಳು. ಮೊದಲು ಅವರೆಲ್ಲರೂ ಧಾರವಾಡದವರೇ; ಆದರೆ ಸರೋಜಳ ತಂದೆಗೆ ಬೆಂಗಳೂರಿನಲ್ಲಿ ಚಾಕರಿ ಸಿಕ್ಕಿದ್ದರಿಂದ ಅವರು ಅಲ್ಲಿಯೇ ಸ್ವಂತ ಮನೆಮಾರು ಮಾಡಿಕೊಂಡಿದ್ದರು. ಸುಂದರಮ್ಮ ಬಾಲವಿಧವೆ; ತಂಗಿಯ ನೆರವಿಗೆಂದು ಬೆಂಗಳೂರಿಗೆ ಬಂದಿದ್ದಳು. ಸರೋಜಳು ಕೇವಲ ಒಂದು ವರ್ಷದ ಮಗುವಿರುವಾಗಲೇ ಅವಳ ತಾಯಿ-ತಂದೆಗಳು ಪ್ಲೇಗಿನ ಪಿಡುಗಿಗೆ ತುತ್ತಾದರು. ಸಾಯುವಾಗ ತಾಯಿಯ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ; ಆದರೆ ತಂದೆಗೆ ಮಾತ್ರ ಹರಣ ಹಾರುವ ವರೆಗೂ ಎಚ್ಚರವಿದ್ದಿತು. ಸರೋಜಳನ್ನು ಅವರು ಸುಂದರಮ್ಮನ ಉಡಿಯಲ್ಲಿ ಹಾಕಿ ಅವಳ ಹೆಸರಿನಿಂದ ಮಾಡಿದ ಆಸ್ತಿ-ಪಾಸ್ತಿಗಳ ಕಾಗದಗಳನ್ನು ಸುಂದರಮ್ಮನ ವಶಕ್ಕೆ ಕೊಟ್ಟು ತೀರಿದರು. ಮುಂದೆ ತನ್ನ ಗತಿಯೇನೆಂದು ಕೇಳಿದಾಗ, ಹೇಗೂ ಸರೋಜಳು ಮದುವೆಯಾಗಿ ಹೋಗತಕ್ಕವಳೆಂದು, ತಾವಿದ್ದ ಮನೆಯನ್ನೇ ಅವಳ ಹೆಸರಿನಿಂದ ಆಗಿಂದಾಗ ಬರೆಯಿಸಿದ್ದರು.

ಸುಂದರಮ್ಮನು ಸಹ ಸರೋಜಳನ್ನು ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದಳು; ಸರೋಜಳಿಗೀಗ ಹದಿನೇಳು ತುಂಬುತ್ತ ಬಂದಿತ್ತು. ಮದುವೆಗೆ ಯೋಗ್ಯಳಾಗಿದ್ದಳು. ಅಲ್ಲಿ ಇಲ್ಲಿ ಎಷ್ಟೋ ಕಡೆಗೆ ಮನೆತನಗಳೂ ಬಂದಿದ್ದವು. ಸುಂದರಮ್ಮನ ಮನಸಿಗೆ ಅವುಗಳಲ್ಲೊಂದೂ ಬಂದಿರಲಿಲ್ಲ. ಸರೋಜಳೇನು—ತಾನಾಯಿತು, ತನ್ನ ಅಭ್ಯಾಸವಾಯಿತು. ಅವಳಾಗ ಐದನೆಯ ಫಾರಂನಲ್ಲಿ ಓದುತ್ತಲಿದ್ದಳು. ಅವಳಿಗಾಗ ತನ್ನ ಮದುವೆಯ ವಿಚಾರವೇ ಬಂದಿರಲಿಲ್ಲವೆಂತಲೋ 'ಅಥವಾ ಅವಳಿನ್ನೂ ಆದಾರ ಮೋಹಜಾಲದಲ್ಲಿಯೂ ಬಿದ್ದಿರಲಿಲ್ಲವೆಂತಲೋ, ಅವಳಿಗೆ ಮದುವೆಯೇ ಸದ್ಯಕ್ಕೆ ಬೇಡಾಗಿದ್ದಿತೆಂತಲೋ— ಯಾವುದೂ ತಿಳಿಯದು — ಅವಳೇನೋ ತನ್ನ ಮಟ್ಟಿಗೆ ಮದುವೆಯ ವಿಚಾರವನ್ನು ಸ್ವಂತ ಎಂದೂ ಮಾಡಿರಲಿಲ್ಲ.

ಪತ್ರವನ್ನೋದುತ್ತ ಓದುತ್ತ ಸುಂದರಮ್ಮನು, " ನಮ್ಮಿಷ್ಟ-ದಂತೆ ತಾವು ಒಪ್ಪಿದ್ದಕ್ಕೆ ಸಂತೋಷ; ತಮ್ಮಿಷ್ಟದಂತೆ ನಡೆಯಲು ನಾವು ಸಹ ಸಿದ್ಧರಿದ್ದೇವೆ. ನಿಮ್ಮ ಹುಡುಗಿಯು ಸ್ವತ: ನೋಡಲಿ-ಯೆಂದು ನನ್ನ ಮಗನ ಫೋಟೋವನ್ನು ಇನ್ನೆರಡು ದಿನಗಳಲ್ಲಿ ಕಳಿಸುವೆನು " ಎಂದು ಗಟ್ಟಿಯಾಗಿ ಓದಿಕೊಂಡು, ಮರಳಿ ಅದಕ್ಕೆ ಉತ್ತರ ಬರೆದುಬಿಟ್ಟಳು. ಎರಡು ಮೂರು ದಿನಗಳು ಕಳೆದವು. ಒಂದು ದಿವಸ ಸಾಯಂಕಾಲ. ಸುಮಾರು ನಾಲ್ಕು ಗಂಟೆಯಾ-ಗಿತ್ತು. ಇದ್ದಲಿನ ಒಲೆಯನ್ನು ಸಾಲ್ಕೇ ಇದ್ದಲುತುಂಡುಗಳಿಂದ ಹೊತ್ತಿಸಿ, ಅದರ ಮೇಲೆ ಕಾಫಿಗೆಂದು ಎರಡು ಲೋಟ ನೀರನ್ನೇರಿಸಿ, ಸುಂದರಮ್ಮ ಮಗ್ಗುಲಮನೆಗೆ ಹರಟೆಗೆ ಹೋಗಿದ್ದಳು; ಸರೋಜಳು ಶಾಲೆಯಿಂದ ಆದೇ ಬಂದು ಬಟ್ಟೆ ಬದಲಾಯಿಸುತ್ತಿದ್ದಳು....

ಟಪಾಲಿನವನು ಬಂದು ಒಂದು ಕಟ್ಟಿದ ಪಾರ್ಸಲನ್ನೂ ಒಂದು ಪಾಕೀಟನ್ನೂ ಕೊಟ್ಟು ಹೋದನು. ಸರೋಜಳು, " ಇದೇ ಇರ-ಬಹುದೇ ಅವರ ಚಿತ್ರ ? ನೋಡಿಯಾದರೂ ನೋಡಲೆ ? ಮೊದಲು ಕಾಗದವನ್ನೇ ನೋಡೋಣ........ ದೊಡ್ಡಮ್ಮ ನನಗೊಂದೂ ಕಾಗದ ತೋರಿಸುವದಿಲ್ಲ, ಇಂದು ಹ್ಯಾಗೂ ಆಕೆ ಎಲ್ಲಿಗೋ ಹೋಗಿದ್ದಾಳೆ " ಎನ್ನುತ್ತ, ಕವರನ್ನು ಒಡೆದು ಓದಿದಳು. "ಮುಖ್ಯವಾಗಿ ಹುಡುಗಿಯು ನೋಡಲೆಂದು ಫೋಟೋ ಕಳುಹಿಸಿದ್ದೇವೆ, ಮದುವೆಯ ಸಿದ್ಧತೆ-ಯನ್ನು ಸಂಪೂರ್ಣವಾಗಿ ಮಾಡಿ ತಮಗೆ ತಿಳಿಸಿದಕೂಡಲೆ ತೀವ್ರ ಹೊರಟು ಬನ್ನಿರಿ. ತಾವು ಕೇಳಿದ ಮೇರೆಗೆ ತಮ್ಮ ಹೋಗುಬರುವ ಪ್ರವಾಸದ ವೆಚ್ಚವನ್ನು ಸಹ ನಾವಿಲ್ಲಿಯೇ ನಿಮಗೆ ಕೊಡಲು ಸಿದ್ಧ-ರಿದ್ದೇವೆ " ಎಂದು ಬರೆದಿದ್ದಿತು.

" ಹುಡುಗಿಯು ನೋಡಲೆಂದು........ " ಎಂದೋದಿದೊಡ-ನೆಯೆ ಸರೋಜಳಿಗೆ ಅತ್ಯಾನಂದವಾಯಿತು. " ಎಲ್ಲಿ ನೋಡೋಣ ! " ಎಂದವಳೇ ಪಾರ್ಸಲನ್ನು ಒಡೆದಳು,

ಅವನ ಆ ನಗೆಮುಖ, ವಿಶಾಲವಾದ ಹಣೆ, ಕುಡಿಹುಬ್ಬುಗಳು, ಬಲಗಡೆಗೆ ಬೈತಲೆ ತೆಗೆದು ಹಿಕ್ಕಿದ್ದರೂ ಗಾಳಿಗೆ ಸ್ವಲ್ಪ ಹಾರಾಡುತ್ತಿದ್ದ ಕ್ರಾಪು, ಇವನ್ನೆಲ್ಲ ನೋಡಿದ ಕೂಡಲೆ, " ಆಹಾ, ನನಗಿವರು ನಿಜವಾಗಿಯೂ ಸರಿಹೋಗುತ್ತಾರಮ್ಮಾ! " ಎಂದು ಚಟ್ಟನೆದ್ದು ಬಾಗಿಲುವಾಡದೊಳಗಿನ ತನ್ನ ಚಿತ್ರವನ್ನು ತೆಗೆದು ಎರಡನ್ನೂ ಜತೆಗೆ ಹಿಡಿದು ನೋಡಿ ನಕ್ಕಳು; ಮೇಜಿನ ಮೇಲಿರುವ ಕನ್ನಡಿಯ ಎದುರಿಗೆ ಎರಡನ್ನೂ ಹಿಡಿದು, " ಬೇಷ್ ! " ಎಂದುಕೊಂಡಳು; ಕಡೆಗೆ ತನ್ನ ಮುಖದ ಜೊತೆಗೇ ಅದನ್ನು ಹಿಡಿದುಕೊಂಡು ನೋಡಿ, ನಲಿದಾಡಿದಳು. ' ಭಾಸ್ಕರ ರಂಗನಾಥ ದೇಶಪಾಂಡೆ, ಬಿ. ಎ. ' ಎಂಬುದನ್ನೋದಿ, " ಓಹೋ, ಭಾಸ್ಕರನಿಗೂ ಸರೋಜಳಿಗೂ ಜೊತೆಯಾಗಲಿಕ್ಕೆ ಬೇಕಲ್ಲವೇ ? " ಎಂದುಕೊಂಡಳು. ಎದೆಯು ದಡದಡಿಸಿತು. ಎಂತಹ ಹುಚ್ಚಿಯು ತಾನೆಂದು ತನ್ನನ್ನು ತಾನೇ ಹಳಿದುಕೊಂಡಳು. " ಇವರನ್ನು ನಾನೊಮ್ಮೆಯೂ ಕಂಡಿಲ್ಲ; ಗುರುತಿಲ್ಲ-ಪರಿಚಯವಿಲ್ಲ; ಹೀಗಿದ್ದು ಈಗಾಗಲೇ, ಮದುವೆಗೆ ಮುಂಚೆಯೆ ನಾನು ಇವರೊಡನೆ ನಗೆಯಾಟಕ್ಕಾರಂಭಿಸಿದೆನೆ ? " ಎಂದುಕೊಂಡು, ಒಳಕ್ಕೆ ಹೋಗಿ, ಕಾಫಿಯನ್ನು ತಯಾರಿಸಿ ಲೋಟಕ್ಕೆ ಸುರಿಯತೊಡಗಿದಳು.

ಮುಂಚೆಯ ಬಾಗಿಲು ಧಡಕ್ಕೆಂದಿತು.

" ಬಂದಿದ್ದೀಯೇನೆ, ಸರೋಜಾ ? "

" ಅಯ್ಯೋ, ಬಂದು ಆಗಲೇ ಕಾಫಿಯನ್ನು ಕೂಡ ಮಾಡಿ ಇಳಿಸಿದೆ. "

" ನಾನು ಏರಿಸಿಹೋಗಿದ್ದೆ, ನೀನು ಬಂದು ಇಳಿಸಿದೆಯೇನೊ ? "

ಇಬ್ಬರೂ ನಕ್ಕರು.

ಕಾಫಿಯನ್ನು ಕುಡಿಕುಡಿಯುತ್ತಲೇ ಸರೋಜಳೆದ್ದು ತನ್ನ ಕೋಣೆಯ ಕಡೆಗೆ ಓಡಿದಳು.

"ಅಯ್ಯೋ, ಹೀಗೇನೇ ಎದ್ದುಬಿಟ್ಟೆ ? ಇವತ್ತೇನಾದ್ರೂ ತಿಂಡಿಗಿಂಡಿ ತಂದಿದ್ದೀಯೇನು ಮತ್ತೆ ? "

"ಇಲ್ಲವಮ್ಮಾ....... ಒಂದು ಚಿತ್ರ, ಒಂದು ಕಾಗದ ಬಂದಿವೆ, ನೀನು ಮನೆಯಲ್ಲಿರಲಿಲ್ಲ, ನಾನೇ ಒಡೆದೆ, ಇಲ್ಲಿ ನೋಡು. "

ಸುಂದರಮ್ಮ ಚಿತ್ರವನ್ನು ಕೈಗೆ ತೆಗೆದುಕೊಂಡು, "ಇದೇನೆ? ಇದು ನಿನ್ನದೇ ಚಿತ್ರ; ಮರೆತು ನಿನ್ನದನ್ನೇ ಮುರಳಿ ಕಳಿಸಿದರೋ ಏನು ?...."

"ಅಲ್ಲವಮ್ಮಾ, ಚೆನ್ನಾಗಿ ನೋಡು " ಎನ್ನುತ್ತ ಕಾಫಿಯನ್ನು ಕುಡಿದು, ಬಟ್ಟಲನ್ನು ಕೆಳಗಿಡುತ್ತ, ತಾನೂ ಆ ಚಿತ್ರದ ಕಡೆಗೆ ಹಣಿಕಿ ಹಾಕಿದಳು. ದೊಡ್ಡಮ್ಮ ಬರುವಳೆಂಬ ಹೆದರಿಕೆಯಿಂದ ಅವಸರದಲ್ಲಿ ಭಾಸ್ಕರರಾಯನ ಚಿತ್ರವನ್ನು ತನ್ನ ಬೀಗದಲ್ಲಿಟ್ಟು, ತನ್ನದನ್ನು ಅದರ ಬದಲಾಗಿ ಪತ್ರದ ಜೊತೆಯಲ್ಲಿ ದೊಡ್ಡಮ್ಮನ ಕೈಗೆ ತಪ್ಪಿ ಕೊಟ್ಟೆನೆಂದು ಆಗವಳಿಗೆ ಹೊಳೆಯಿತು. ನಾಚಿಕೆ-ಭಯಗಳಿಂದ ಮುಖವು ಕೆಂಪಡರಿತು.

"ಅಂದ್ರೆ, ಆ ಚಿತ್ರ ಬಂದಕೂಡಲೆ ನಿನ್ನದನ್ನ ನೀನು ಹೊರಗೆ ತೆಗೆದಿದ್ದಿಯೇನು?........ಇಲ್ಲವೆ ಈಗಾಗಲೆ ಹುಡುಗನನ್ನ ನಿನ್ನವನನ್ನಾಗಿ ಮಾಡಿಕೊಂಡುಬಿಟ್ಟು, ಬೀಗದಲ್ಲಿ ಸೇರಿಸಿದೆಯೋ ?........"

ಮುರಳಿ ತನ್ನದನ್ನು ಒಳಗಿಟ್ಟು, ಭಾಸ್ಕರನ ಚಿತ್ರವನ್ನು ತಂದು ದೊಡ್ಡಮ್ಮನ ಕೈಗಿತ್ತಳು.

ನೋಡಿದ ಕೂಡಲೆ ಸುಂದರಮ್ಮನು, "ಅಹಾ, ಎಂತಹ ಸುಕುಮಾರನಮ್ಮಾ ? ಸರೋಜ, ನಿನಗೆ ನಿಜವಾಗಿಯೂ ತಕ್ಕ ವರ; ನಿನ್ನ ರೂಪಕ್ಕೂ ಗುಣಕ್ಕೂ ಮಿರುಗಿಡೋ ತರುಣ. ಆದರೆ...."

"........ನಿನಗೆ ಮನಸಿಗೆ ಬರ್ತಾನೆಯೋ ಇಲ್ಲವೋ ?" ಎಂದು ದೊಡ್ಡಮ್ಮ ಮಾತುಮುಗಿಸಿ, ನಗೆಯಾಡುವಳೇನೋ ಎಂದು ತಿಳಿದು,

ಸರೋಜ ಥಟಕ್ಕನೆದ್ದು ಹೊರಕ್ಕೆ ಬಂದಳು. ಆದರೂ "ಆದರೆ,........ ನಿನ್ನ ಹಣೆಬರಹ,........ ನಿನ್ನ ಹಡೆದಾಕೆ ಇದ್ದಿದ್ದರೆ ಹೀಗೆ ಮಾಡುತ್ತಿದ್ದಳೆ ?...." ಎಂಬ ಪಿಸುಮಾತುಗಳು ಅವಳ ಕಿವಿಗೆ ಬಿದ್ದೇ ತೀರಿದವು. ಮುಂದಿನ ಜಿನುಗುಮಾತು ಕೇಳಿಸದೆ, ದೊಡ್ಡದೊಂದು ನಿಟ್ಟುಸಿರು ಕೇಳಿಸಿತು.

ಸರೋಜಳು ರೂಮಿನಲ್ಲಿ ವಿಶ್ರಾಂತಿಗಾಗಿಯೆಂದು ಏನನ್ನೋ ಓದಲು ಕುಳಿತಳು; ಓದಿನ ಕಡೆಗೆ ಮನಸೇ ಹರಿಯಲೊಲ್ಲದು; ತಟ್ಟನೆದ್ದು ಪಾರ್ಕಿನ ಕಡೆಗಾದರೂ ಹೋಗಿಬರೋಣವೆಂದು, ಮನೆಯಲ್ಲಿ ಹೇಳಿ ಹೊರಬಿದ್ದಳು.

ದೊಡ್ಡಮ್ಮ ಹಾಕಿದ ನಿಟ್ಟುಸಿರಿನ ಅರ್ಥವೇನು ? 'ನಿನ್ನಮ್ಮ ಇದ್ದಿದ್ದರೆ ಹೀಗೆ ಮಾಡುತ್ತಿದ್ದಳೆ ?' ಎಂಬುದರ ಅರ್ಥವಾದರೂ ಏನಿರಬಹುದು ?.... ಅಮ್ಮನ ನೆನಪಾಗಿ ದೊಡ್ಡಮ್ಮನಿಗೆ ನಿಟ್ಟುಸಿರು ಹೊರಟಿರಬೇಕು. ನಮ್ಮಮ್ಮ ತನ್ನಷ್ಟು ಚುರುಕಳೂ ಜಾಣಳೂ ಇದ್ದಿರಲಿಲ್ಲವೆಂದು ದೊಡ್ಡಮ್ಮ ಆಗಾಗ ಹೇಳುತ್ತಿರುತ್ತಾಳೆ; ಅವಳು ಇದ್ದಿದ್ದರೆ ಭಾಸ್ಕರನಂತಹ ಸುಶಿಕ್ಷಿತ ವರನನ್ನು ನೋಡುವದಕ್ಕಾಗುತ್ತಿದ್ದಿಲ್ಲವೆಂದು ದೊಡ್ಡಮ್ಮ ಹೀಗೆ ಅಂದಿರಬೇಕು. ಸರಿ; ಹೀಗೆಯೇ ಇರಲು ಸಾಕು. ನಮ್ಮ ಅಮ್ಮನ ನೆನಪು ಸಹ ನನಗಾಗದಂತೆ ಪ್ರೇಮದಿಂದ ನನ್ನನ್ನು ಕಾಣುತ್ತಿರುವ ಸುಂದರಮ್ಮನ ವಿಚಾರದಲ್ಲಿ ಅನ್ಯಥಾ ಭಾವಿಸಲಾರೆ........

ಮನೆ ಬಿಡುವಾಗ ಜಡಮನಸಿನಿಂದ ಹೊರಬಿದ್ದಿದ್ದಳು; ಎಷ್ಟೆಂದರೂ ಸರಳ ಮನಸಿನ ಬಾಲೆಯುವಳು. ಮರಳುವಾಗ ಸದ್ವಿಚಾರದಿಂದ ಸಮಾಧಾನ ಹೊಂದಿದವಳಾಗಿ, ತಿಳಿಮನಸಿನಿಂದ ಮನೆಗೆ ಬಂದಳು; ಊಟಉಡಿಗೆಗಳನ್ನು ತೀರಿಸಿ, ಸುಖವಾಗಿ ನಿದ್ರಿಸಿದಳು.

* * * *

ದಿನಗಳು ಕಳೆದವು. ತಿಂಗಳುಗಳು ಸಂದವು. ಕೊನೆಗೆ ಎಪ್ರಿಲ ತಿಂಗಳು ಮುಗಿಯಬಂದಿತು.

ಧಾರವಾಡದಿಂದ ಸುಂದರಮ್ಮನಿಗೆ ಪತ್ರವೊಂದು ಬಂದಿತು— ಮೇ ತಿಂಗಳ ಎರಡನೆಯ ವಾರದಲ್ಲಿ ಮದುವೆಯ ಸಿದ್ಧತೆ ಮಾಡುವದಾಗಿ.

* * * *

ಗೋಪಾಳಪುರದಲ್ಲಿ, ಬಡ್ಡಿಯ ವ್ಯವಹಾರಸ್ಥರಾದ ರಂಗನಾಥ-ರಾವ ಸಾಹುಕಾರರೆಂದರೆ ಇಡಿಯ ಊರಿಗೆಲ್ಲ ಗೊತ್ತು. ಬಡವರು ಮೊದಲ್ಗೊಂಡು ಬಲ್ಲಿದರ ವರೆಗೂ ಎಲ್ಲರ ವ್ಯವಹಾರವು ಅವರಲ್ಲಿ. ಅವರಿಗೀಗ ಏನಿಲ್ಲೆಂದರೂ ಅರವತ್ತು ವರುಷಗಳಾಗುತ್ತ ಬಂದಿದ್ದವು. ಆದರೂ ಮೊದಲಿನಿಂದ ನಿರ್ವ್ಯಸನಿಗಳಾದುದರಿಂದ, ಅವರ ಮೈಕಟ್ಟು ಧಷ್ಟಪುಷ್ಟವಾಗಿತ್ತು. ಮನೆಯಲ್ಲಿ ಅವರು, ಅವರ ಎರಡನೆಯ ಹೆಂಡತಿಯ ಮಗ ಭಾಸ್ಕರರಾಯ, ಒಬ್ಬ ಅಡಿಗೆಯವ---ಮೂವರೇ. ರಾಯರ ನಾಲ್ಕು ಜನ ಹೆಂಡಂದಿರೂ ತೀರಿಹೋಗಿ, ನಮ್ಮ ಭಾಸ್ಕರ-ರಾಯನು ತಾಯಿಯರಿಲ್ಲದ ಪರದೇಶಿ ಮಗನಾಗಿದ್ದನು.

ಭಾಸ್ಕರನೀಗ ಪುಣೆಯಲ್ಲಿದ್ದನು. ವಕೀಲಿ ಅಭ್ಯಾಸವನ್ನು ನಡೆಯಿ-ಸಿದ್ದನು; ಅವನಿಗೆ ಹುಡುಗಿಯ ಫೋಟೋ ನೋಡಲಿಕ್ಕೆ ಕಳುಹಿಸಿ, ಅವನ ಒಪ್ಪಿಗೆಯನ್ನು ಪಡೆದೂ ಆಗಿತ್ತು. "ಹಿರಿಯರಿಗೆ.... ತಿಳಿದ-ವರಿಗೇನು ಹೇಳಬೇಕು? ತಮ್ಮ ಮನಸಿಗೆ ಬಂದಂತೆ ಮಾಡಬಹುದು" ಎಂದು ವಿನಯದಿಂದಲೂ ನಾಚಿಕೆಯಿಂದಲೂ ಪತ್ರ ಬರೆದಿದ್ದನು; ಅಲ್ಲದೆ ಭಾಸ್ಕರನಿಂದ ಅವನ ಫೋಟೋವನ್ನು ತರಿಸಿ ಸುಂದರಮ್ಮನ ಊರಿಗೂ ಕಳಿಸಲಾಗಿತ್ತು.

ಮೇ ತಿಂಗಳಲ್ಲಿ ಸುಂದರಮ್ಮನಿಗೊಂದು ದಿವಸ ತಂತಿಯು ಬಂದಿತು; ಕೂಡಲೇ ಸುಂದರಮ್ಮ ನಾಲ್ಕು ಬಳಕೆಯ ಅರಿವೆಗಳನ್ನು ಕಟ್ಟಿಕೊಂಡು ಸರೋಜಳೊಡನೆ ಹೊರಟೇ ಬಿಟ್ಟಳು.

"ದೊಡ್ಡಮ್ಮಾ, ಮತ್ತಾರೂ ಮಂದಿಮಕ್ಕಳು ಇಲ್ದೇನೇ ಮದುವೆಗೆ ಹೊರಡೋಣವೆ?" ಗಟ್ಟಿ ಧೈರ್ಯಮಾಡಿ ಕೇಳಿದಳು.

"ಯಾತಕ್ಕೆ ಮಗೂ, ನಾವೇನು ಅವರಿಗೆ ಒಂದು ಕಾಸನ್ನಾ

ದರೂ ಕೊಟ್ಟಿರುವೆವೆ ? ವರದಕ್ಷಿಣೆ ವರೋಪಚಾರವೆಂದೇನೂ ಕೊಟ್ಟಿಲ್ಲ— ಕೊಡುವಂತಿಲ್ಲ. ಏನನ್ನೂ ವೆಚ್ಚಮಾಡದೆ ನೀನು ಲಕ್ಷಾಧೀಶಳಾಗಲಿಕ್ಕೆ ಹೊರಟಿರುತ್ತೀಯೆ. ಸುಮ್ಮನೆ ಇನ್ನೊಬ್ಬರನ್ನು ಕಟ್ಟಿಕೊಂಡು ಅಲ್ಲಿಗೆ ಹೋಗಿ ಅವರಿಗೆ ಭಾರ ಮಾಡೋಣ ಬೇಡ."

ಸರೋಜ ಸುಮ್ಮನಾದಳು ಮರುದಿವಸ, ಅಂದರೆ ಮದುವೆಯ ದಿವಸವೇ ಸಾಯಂಕಾಲದ ಗೋಧೂಳೀ ಮುಹೂರ್ತಕ್ಕೆ ಸ್ಟೇಶನ್ನಿಗೆ ಬಂದರು.

ಕನ್ಯೆಯನ್ನು ನೋಡಲು ರಾಯರೊಡನೆ ಹೋಗಿದ್ದ ಮುದುಕ ಕಾರಕೂನನೊಬ್ಬನು, ಒಬ್ಬಿಬ್ಬರು ಮುತ್ತೈದೆಯರು ಇವರೊಡನೆ, ರಾಯರ ಕಾರು ಅವರನ್ನು ಸ್ವಾಗತಿಸಿ ಕರೆದೊಯ್ಯಲು ಸ್ಟೇಶನ್ನಿಗೆ ಬಂದಿದ್ದಿತು.

"ವರದಕ್ಷಿಣೆ ಕೊಟ್ಟು, ತಮ್ಮ ಹುಡುಗಿಯರ ಸಲುವಾಗಿ ಮನೆಮಾರುಗಳನ್ನು ತೊಳೆಯಲು ಸಿದ್ಧರಾದ ತಂದೆತಾಯಿಗಳಿಗೆ ಒಳ್ಳೆಯ ಅಳಿಯನು ಸಿಕ್ಕದೇ ಇರೋ ಕಾಲ. ಏನನ್ನೂ ಕೊಡದೆ ನಮಗೆ ಇಷ್ಟೊಂದು ಆದರ ಯಾಕೆ ಅಪ್ಪಾ?" ಸುಂದರಮ್ಮನೆಂದರು.

"ಇರ್ಲಿ, ನಮ್ಮವ್ವಾ, ಬರ್‍ರಿ-ಬರ್‍ರಿ. ಲಗ್ನಕ್ಕ ಎರಡs ತಾಸವ— ಲಗೂ ನಡೀರಿ" ಕಾರಕೂನನೆಂದನು.

ಮನೆಯಲ್ಲಿ ಒಂದು ಪ್ರಶಸ್ತವಾದ ಕೋಣೆಯನ್ನು ಶೃಂಗರಿಸಿ ತಾಯಿಮಗಳಿಗೆ ಇಳಿದುಕೊಳ್ಳಲಿಕ್ಕೆಂದು ಇಟ್ಟಿದ್ದರು. ಹುಡುಗಿಗೆ ಕೂಡಲೆ ಮುತ್ತೈದೆಯರು ಸುಗಂಧದ ಎಣ್ಣೆಯನ್ನು ಹಚ್ಚಿ ಎರೆದು, ಜರತಾರಿಗಳನ್ನು ಉಡಲು ತೊಡಲು ಕೊಟ್ಟರು. ಹೊಟ್ಟೆತುಂಬ ಬಗೆಬಗೆಯ ತಿನಸುಗಳ ಉಪಹಾರವಾಯಿತು.

ಬಳಿಕ ಸರೋಜಳಿಗೆ ಮುತ್ತಿನ ಮುಂಡವಳ್ಳಿಯನ್ನು ಕಟ್ಟಿ, ಮೈತುಂಬ ಮುತ್ತುರತ್ನದ ಆಭರಣಗಳನ್ನು ತೊಡಿಸಿ, ಅವಳನ್ನು

ಚೈತ್ರಮಾಸದ ಗೌರಿಯಂತೆ ಶೃಂಗರಿಸಿದರು; ಬಳಿಕ ಮುಖದ ತುಂಬ ಜರದ 'ಮೇಲ್ದಿ'ಯನ್ನು (ಮೇಲುದವನ್ನು) ಹೊಚ್ಚಿದರು.

"ದೊಡ್ಡವರ ಮನೆತನ— ಒಮ್ಮೆಲೇ ಮುಸುಕು ತೆಗೆಯ ಬೇಡ. ಈ ಊರಿನವರ ವಾಡಿಕೆಗೆ ಮುಖದ ಸೆರಗು ತೆಗೆಯುವದು ಒಪ್ಪುವದಿಲ್ಲವಂತೆ" ಎಂದು ಸೂಚಿಸಿ, ದೊಡ್ಡಮ್ಮ ಮುತ್ತೈದೆಯ ರೊಡನೆ ಅವಳನ್ನು ಹೊರಗೆ ಹಸೆಮಣೆಗೆ ಕಳುಹಿಸಿ, ಬೆನ್ನಗುಂಟ ತಾನೂ ನಡೆದಳು.

ಮದುವೆಗೆ ಏನಿಲ್ಲೆಂದರೂ ನೂರಾರು ಜನ ಬಂದಿದ್ದಿತು; ಆದರೂ ಚಿತ್ರದೊಳಗಿನ ಗೊಂಬೆಗಳಂತೆ ಎಲ್ಲರೂ ಸ್ತಬ್ಧರಾಗಿದ್ದರು. 'ಅಮ್ಮಯ್ಯಾ, ಇದೆಂಥ ಊರಿದು!' ನಾನೇನು Silent Film ನಲ್ಲಿ ಕೆಲ್ಸ ಮಾಡಲಿಕ್ಕೆ ಬಂದಿದ್ದೇನೆಯೆ?' ಎಂದು ಕ್ಷಣಹೊತ್ತು ದಿಗಿಲು ಬಿದ್ದಿತು ಸರೋಜಳಿಗೆ.

ಅಕ್ಷತೆಗಳು ಬಿದ್ದವು; ಮಾಂಗಲ್ಯ ಕಟ್ಟಿದರು; ಮುಸುಕಿನೊಳ-ಗಿರುವಾಗಲೇ ಲಾಜಾಹೋಮವಾಯಿತು. ಹೊರಗೆ ಬ್ಯಾಂಡು ಆರ್ಭ-ಟಿಸುತ್ತಿದ್ದಿತು. ವರನಿಗೆ ಹಾರ ಹಾಕುವದಕ್ಕೆಂದು, ಅವಳ ಮೇಲ್ದಿ ಯನ್ನು ಸರಿಸಿದರು.

ಹುಡುಗಿಯು ಮೊದಲೇ ನಾಚಿ ನಾಚಿ ಸತ್ತಿದ್ದಳು. ಆದರೂ ನಡುವೆಯೊಮ್ಮೆ ಮುಸುಕಿನೊಳಗಿಂದಲೇ ಮೆಲ್ಲಗೆ ಪತಿಯ ಪುಷ್ಟವಾದ ಕೆಂಪಾದ ಪಾದಗಳನ್ನು ನೋಡಿ ವಂದಿಸಿದ್ದಳು.

ಹಾರ ಹಾಕುವಾಗ ಮೆಲ್ಲಗೆ ಮುಖವನ್ನು ಮೇಲಕ್ಕೆ ಮಾಡಿ ದಳು. ಬೆಳ್ಳನೆಯ ಮೀಸೆ-ಗಡ್ಡಗಳ, ನೀರಿಗೆ ಬಿದ್ದ ಮುದಿಮುಖ ವನ್ನು ನೋಡಿದೊಡನೆಯೆ, "ಅಯ್ಯೋ, ದೊಡ್ಡಮ್ಮಾ, ನನ್ನನ್ನು ನೋಡಲಿಕ್ಕೆ....ಬಂದಿದ್ದ....ಮಾವಂದಿರು...." ಎಂದು ಚೀರುತ್ತಲೇ ದೊಪ್ಪನೆ ನೆಲಕ್ಕೆ ಬಿದ್ದು ಮೂರ್ಛೆಹೋದಳು.

ಎಲ್ಲ ಮುತ್ತೈದೆಯರು ಗಾಬರಿಯಾದರು.

"ಅಂದ್ರ, ಈ ಹುಡಿಗ್ಗೆ ತನ್ನ ಪದಿವಿ ಮುದುಕರ ಸಂಗತೀನ ಅಂತ ಗೊತ್ತಿಲ್ಲs ಇಲ್ಲೇನ್ರೆ ಹಾಂಗಾರ?" ಒಬ್ಬಳೆಂದಳು.

ಇನ್ನೊಬ್ಬಳು: "ಅಯ್ಯ, ಎಲ್ಲೀದ ಗೊತ್ತಾಗತದ! ಆಕೀ ದೊಡ್ಡವ್ವನs ಐದ ಸಾವಿರಕ್ಕೆ ಮಾರಿಕೊಂಡಾಳ. ಈ ಮುದುಕಾ.... ಹುಡಿಗೀ ಫೋಟೋ ಹುಡುಗ್ಗ, ಹುಡುಗನ ಫೋಟೋ ಹುಡಿಗ್ಗೆ ತೋರಿಸಿ, ತಾನs ಆಕಿನ್ನ ಮಾಡಿಕೊಂಡಾ—ಒಂದ ಎಳೀ ಕರುವಿನ ಕುತ್ತೀಗೀ ಕೊಯ್ದಾ."

ದೊಡ್ಡಮ್ಮನ ಮುಖವು ಕಪ್ಪೇರಿ, ಹುಚ್ಚಿಟ್ಟಿತು. ಎಂತಹ ಅನರ್ಥವಾಯಿತು ತನ್ನಿಂದ, ಎಂದು ಆಗ ಪಶ್ಚಾತ್ತಾಪಪಟ್ಟಳು. ಮುದಿ ಮದುಮಗನು "ಹುಡಿಗೀನ್ನ ಸಂಬಾಳಿಸಿರಿ, ಆ ಮಾಲೀಗೀಲೀ ಈಗ ಇರವಲ್ಲಾಕ್ಯ, ಅಕ್ಕೀಕಾಳೊಂದು ಸುಸೂತ್ರಾಗಿ ಬಿದ್ರೊ ಸಾಕು" ಎನ್ನುತ್ತಾ ಎದ್ದು ದಿವಾಣಖಾನೆಗೆ ಹೋಗಿ ಎಲ್ಲರ ಊಟದ ವ್ಯವಸ್ಥೆಗೆ ಹುಕುಂ ಬಿಟ್ಟನು.

ಹುಡುಗಿ ಎಚ್ಚತ್ತಾಗ ಸುಂದರಮ್ಮ ಒಬ್ಬಿಬ್ಬರ ಕೈಯಿಂದ ಛೀ-ಥೂ ಎನ್ನಿಸಿಕೊಳ್ಳುತ್ತಿದ್ದಳು.

"ಅಯ್ಯೋ, ದೊಡ್ಡಮ್ಮಾ, 'ಸಿನ್ನಮ್ಮ ಇದ್ದಿದ್ರೆ ಹೀಗೆ ಮಾಡ್ತಾ ಇದ್ದಳೇ?' ....ನಿನ್ನ ಮಾತಿನ ಅರ್ಥ ಈಗ ನನಗಾಯಿತೇ, ಪಿಶಾಚಿ! ಐದು ಸಾವಿರಕ್ಕೆ ನನ್ನನ್ನು ಈ ಮುದಿಗೂಬೆಗೆ ಆಹುತಿ ಕೊಟ್ಟೆಯಾ? ನಿನಗೆ ಹಣ ಬೇಕಿದ್ದರೆ ಹೇಳಬಾರದಿತ್ತೆ, ನಾನು ನನ್ನ ಇಪ್ಪತ್ತು ಸಾವಿರವನ್ನೂ ನಿನಗೇ ಬಿಟ್ಟು ಕೊಡುತ್ತಿದ್ದೆ.... ದೊಡ್ಡಮ್ಮಾ, ನಿನ್ನ ನಿಟ್ಟುಸಿರಿನ ಅರ್ಥ ಈಗ ನನಗಾಯಿತೇ.... ಅಯ್ಯೋ ಅಮ್ಮಾ, ನೀನಿದ್ದಿದ್ದರೆ, ನಿಜವಾಗಿಯೂ ಹೀಗೆ ಮಾಡ್ತಿದ್ದೆಯೇ.... ಅಯ್ಯೋ, ಅಮ್ಮಾ..........."

* * *

ನಾಲ್ಕೈದು ದಿನಗಳ ತರುವಾಯ ಸೂಟಿಗೆಂದು ವಿನೋದಕ್ಕಾಗಿ ಪ್ರವಾಸ ಮಾಡಲು ಹೋಗಿದ್ದ ಭಾಸ್ಕರನು ಮರಳಿ ಊರಿಗೆ ಬಂದನು. ತಂದೆಯ ಕಪಟತಂತ್ರವನ್ನು ಗೆಳೆಯರಿಂದ ಸ್ಟೇಶನ್ನಿನಲ್ಲಿಯೇ ಅರಿತುಕೊಂಡು ಬೆಪ್ಪಾದನು.

" ತಾನs ಮಾಡಿಕೋತೇನಿ ಆ ಹುಡಿಗೀನ್ನಂತ ಹೇಳ ಬೇಕಿತ್ತು ನನಗ, ನಾಯೇನ ಬ್ಯಾಡಂತಿದ್ನೆ ? ಸ್ವತಃ ನನ್ನ ಕೈಲೆ ಅಪ್ಪನ ತಲೀಮಾಲ ಈಗ ಎರಡು ಸಾರೆ ಹ್ಯಾಂಗೂ ಅಕ್ಷತಾ ಹಾಕಿದ್ವೆ. ಇನ್ನೂ ಒಮ್ಮೆ ಹಾಕ್ತಿದ್ದೆ ........ ಅಲ್ದ, ಲಗ್ನದ ಸುದ್ದಿ, ಕಡಿತನಕಾನೂ ಇಷ್ಟು ಗುಪ್ತಾಗೆರs ಹ್ಯಾಂಗ ಉಳೀತು, ಆ ಹುಡಿಗೆರs ಅವಗ ಮಾಡಿಕೊಳ್ಳಿಕ್ಕೆ ಒಪ್ಪಿದ್ಲರ ಹ್ಯಾಂಗ, ಎಲ್ಲಾನೂ ಆಶ್ಚರ್ಯನs ಆಗೂ ಹಾಂಗದನಪಾ ! "

ಒಬ್ಬ ಗಟ್ಟಿಗ ಗೆಳೆಯನು ಉತ್ತರ ಕೊಟ್ಟನು. " ತಮ್ಮಾ, ಅದೆಲ್ಲಾ ನಿಮ್ಮಪ್ಪನ ಹತೀಲಿರೋ ದುಡ್ಡಿನ ಬಲಾ ನೋಡು. ಹುಡಿಗ್ಗೆ ಹುಡಿಗ್ಗೆ— ಸಂಪೂರ್ಣ ಮೋಸಾ ಮಾಡಿದಾ. ಎಲ್ಲಾರ ಬಾಯಾಗ ದುಡ್ಡು ತುಂಬಿ, ಲಗ್ನದ ಸುದ್ದಿ ಅವರ ಬಾಯಾಗಿಂದ ಹೊರಗ ಹೋಗದ್ಹಾಂಗ ಅವರ ಬಾಯಿ ಬಂದಮಾಡಿಬಿಟ್ಟಾ...."

ಭಾಸ್ಕರನಿನ್ನೂ ಅಭ್ಯಾಸದ ಮೂಲಕ ಅವಿವಾಹಿತನು. ಸರೋಜಳಂತೂ ರಂಗರಾಯರ ಪತ್ನಿಯಾಗಿದ್ದುಬಿಟ್ಟಳು. ಆದರೂ ರಂಗರಾಯರು ಬಡ್ಡಿಯ ವ್ಯವಹಾರದಲ್ಲಿ ತಲ್ಲೀನರಾಗಿ ದಿವಾಣಖಾನೆಯಲ್ಲಿ ಕುಳಿತಾಗ, ಒಮ್ಮೊಮ್ಮೆ ಭಾಸ್ಕರನು ಅಳುತ್ತಿದ್ದ ಸರೋಜಳು ಸಂತೈಸುತ್ತಿರುವದನ್ನೂ ಒಮ್ಮೊಮ್ಮೆ ಸರೋಜಳು ಅಳುತ್ತಿದ್ದ ಭಾಸ್ಕರನು ಸಂತೈಸುತ್ತಿರುವುದನ್ನೂ ಪರಮಾತ್ಮನೇನೋ ಎಷ್ಟೋ ಸಾರೆ ಕಂಡಿರುವನೆಂದು ಜನರು ಆಡಿಕೊಳ್ಳುತ್ತಾರೆ.... ಅದು ಸಟೆಯೋ, ದಿಟವೋ, ಆ ಪರಮಾತ್ಮನಿಗೇ ಗೊತ್ತು.

# ನನ್ನನ್ನು ನೋಡಲಿಕ್ಕೆ ಬಂದಾಗ—

ನಾನೇನು ನಿಮ್ಮಂತೆ ದೊಡ್ಡ ಕವಯಿತ್ರಿಯೂ ಅಲ್ಲ, ಕತೆಗಾರ್ತಿಯೂ ಅಲ್ಲ. ಏನೋ, ನಿಮ್ಮಂಥ ದೊಡ್ಡ ಬರಹಗಾರರು ಬರೆದವುಗಳನ್ನು ಓದಿ ತಿಳಿದುಕೊಳ್ಳಬೇಕೆಂಬ ಲವಲವಿಕೆ ಮಾತ್ರ ಇದೆ. ಇದೇನು, ಏನನ್ನೋ ಹೇಳಲಿಕ್ಕೆಂದು ಹೊರಟವಳು ಎಲ್ಲಿಗೋ ಬಂದೆನಲ್ಲ.... ? ನೆನಪಾಯಿತು. ನಾನು ಹೇಳಬೇಕೆಂದು ಮಾಡಿದ್ದು ನನ್ನನ್ನು ನೋಡಲಿಕ್ಕೆ ಬಂದಾಗಿನ ವಿಷಯ. ವಿಷಯವೆಂದೊಡನೆ ಅದೇನು ಗಹನವಾದ ವಿಷಯವೆಂದು ತಿಳಿಯಬೇಡಿರಿ ಮತ್ತೆ ! ಏನೋ ಒಂದು ನಗೆಮಾತು. " ನನ್ನನ್ನು ನೋಡಲಿಕ್ಕೆ ಬಂದಾಗ " ಎಂದು ಕೇಳಿದೊಡನೆಯೇ " ನಾನು ಆಗ ವಿಪುಲವಾಗಿ ಚಿನ್ನದಾಭರಣಗಳನ್ನಿಟ್ಟುಕೊಂಡು, ಜರತಾರಿಯ ಉಡಿಗೆಯನ್ನುಟ್ಟುಕೊಂಡು, ಥಳಕು - ಬೆಳಕು - ಒನಪು - ಒಯ್ಯಾರಗಳಿಂದ ಮೆರೆಯುತ್ತಬಂದು, ಮುಖ್ಯ ' ಅವರೆ 'ದುರಿಗಾಗಲಿ, ' ಅತ್ತೆ 'ಯವರೆದುರಿಗಾಗಲಿ ಅಥವಾ ಮತ್ತಿನ್ನಾರೋ ನೋಡಲಿಕ್ಕೆ ಬಂದ ಜನರೆದುರಿಗಾಗಲಿ ಕುಳಿತುಕೊಂಡ ಸಂಗತಿ ಇರಬಹುದು " ಎಂದು ತಾವು ಊಹಿಸಿರಬಹುದು. ಏಕೆಂದರೆ, ನನ್ನಂತಹ ಇನ್ನಾವ ಹುಡುಗಿಯನ್ನೇ ಆಗಲಿ ನೋಡಲಿಕ್ಕೆ ಬಂದಾಗ, ಹುಡುಗಿಗೂ ಸಿಂಗಾರಬಂಗಾರಗಳಿಂದ ಅಂದಚಂದವಾಗಿ ಕಾಣಬೇಕೆಂಬ ಆಸೆಯಾಗುವದುಂಟು; ಇತ್ತವಳ ತಾಯಿತಂದೆಯವರಿಗೂ, ಹೆರವರಿಂದಾದರೂ ಆಗಲಿ, ನಾಲ್ಕು ಎರವಿನ ಒಡವೆಗಳನ್ನು ತಂದು ಹುಡುಗಿಯ ಮೈಮೇಲಿಟ್ಟು ಹುಡುಗಿಯ ಸೌಂದರ್ಯವನ್ನು ಹೆಚ್ಚಿಸಿ ತೋರಿಸಿ, ತಾವು ಬಡವರಿದ್ದರೂ ಬಲ್ಲಿದರಂತೆ ಬೀಗರೆದುರಿಗೆ ತೋರಿಸಿಕೊಳ್ಳಬೇಕೆಂದು ಹಾತೊರೆಯುವ ವಾಡಿಕೆಯೂ ಉಂಟು. ಅದಕ್ಕೆಯೇ ನಾನಂದದ್ದು ಸಿಂಗಾರದ ಸೊಬಗನ್ನು ನಾನು ಹೇಳಲಿರುವೆನೆಂದು ನೀವು ತರ್ಕಿಸಿರ-

ಬಹುದೆಂದು. ಹಾಗೆ ಊಹಿಸಿದ್ದರೆ ಊಹಿಸಬೇಡಿರೆಂದು ನಾನು ನಿಮಗೆ ಹೇಳುವೆ. ಯಾಕೆಂದರೆ, ನಾವು ಬಡವರಿದ್ದರೂ ನಮ್ಮ ಜನರಿಗಾಗಲಿ, ನೋಡಬಂದವರಿಗಾಗಲಿ, ತೋರಿಕೆಯ ಸಿರಿವಂತಿಕೆ, ಹುಡಗಿಯ ಚೆಲುವಿಕೆ ಯಾವ್ದೂ ಬೇಕಾಗಿರಲಿಲ್ಲ. ಆದ್ದರಿಂದ ಆ ಮಾತೇ ಬೇಡಿನ್ನು ಇಲ್ಲಿ.

ಗೆಳೆಯನೊಡನೆ ಇಂತಹ ದಿನ ಬರುವರೆಂಬುದಾಗಿ ಮುಂಗಡೆ-ವಾಗಿಯೇ ತಿಳಿದಿತ್ತು. ನನ್ನನ್ನು ನೋಡಲಿಕ್ಕೆ ಬರುವ ಮುನ್ನಾ-ದಿನವೇ ನಮ್ಮಕ್ಕ-ಭಾವಂದಿರು ನಮ್ಮಲ್ಲಿಗೆ ಬಂದಿದ್ದರು. ಆಯಿತು. ಆ ದಿನವೂ ಬಂದಿತು. ಮನೆಯನ್ನು—ಮನೆಯೆನ್ನುವದಕ್ಕಿಂತ ನಾವಿ-ರುವ ಮನೆಗೆ ಹುಲ್ಲುಗುಡಿಸಲು ಎಂದರೇನೇ ಹೆಚ್ಚಾಗಿ ಒಪ್ಪುವದು· ಜಳಜಳ ಕಸಗೂಡಿಸಿಟ್ಟು ಒಂದು ಜಮುಖಾನೆಯನ್ನು ಹಾಸಿಟ್ಟಿದ್ದರು. ಬಡವರ ಮನೆಯಲ್ಲಿ ಇದಕ್ಕೂ ಹೆಚ್ಚಿನ ಇನ್ನಾವ ಸಿದ್ಧತೆಯಾಗಬೇಕು? ಸಾಲದ್ದಕ್ಕೆ ನಮ್ಮವ್ವ-ಅಕ್ಕ ಕೂಡಿ ಸ್ವಲ್ಪ ಚಹಾ-ಫಲಾಹಾರದ ಏರ್ಪಾಡನ್ನು ಮಾಡಿಟ್ಟುಕೊಂಡು ಏನೋ ಬಹಳೇ ಗಡಿಬಿಡಿಯ ದೊಡ್ಡ ಕೆಲಸದಲ್ಲಿ ತೊಡಗಿದ್ದಂತೆ ಸುಮ್ಮಸುಮ್ಮನೆ ಅತ್ತಿಂದಿತ್ತ ಇತ್ತಿಂಪತ್ತ ಓಡಾಡತೊಡಗಿದ್ದರು. ಮಧ್ಯಾಹ್ನವೂ ಆಯಿತು. ಅಳಿಯ ದೇವರು ಇನ್ನೂ ಏಕೆ ಬರಲಿಲ್ಲವೆಂಬ ಚಿಂತೆ ಮನೆಯವರಿಗೆ. ಮಧ್ಯಾಹ್ನಕ್ಕೆ ಸರಿಯಾಗಿ ಎರಡು ಗಂಟೆಗೆ ಬರುವದಾಗಿ ಹೇಳಿದ್ದರು. ಮೂರು ಬಡಿದು ಹೋಯಿತು. ನಮ್ಮ ತಾಯಿಯವರು 'ಇನ್ನೂ ಏಕೆ ಬರಲಿಲ್ಲ?' ಎಂದು ಹುಬ್ಬು ಮೇಲಕ್ಕೇರಿಸಿ ಬೀದಿಯ ಕಡೆಗೆ ನೋಡಿಯೆ ನೋಡುವರು. 'ಏತಕ್ಕೆ ಸುಮ್ಮನೆ ದಾರೀ ನೋಡುವಿ-ರಮ್ಮಾ? ಬರುವವರಾದರೆ ಬಂದಾರು, ಇಲ್ಲವಾದರೆ ಬಿಟ್ಟಾರು' ಎಂಬ ಅರ್ಥವನ್ನು ಸೂಚಿಸುತ್ತ, ಒಳಗೊಳಗೆ ಏತಕ್ಕೆ ಬರಲಿಲ್ಲವೋ ಎಂದು ಕಾತರಳಾಗುತ್ತ, ತಾಯಿಗೆ ಕೇಳುವ ನೆವಮಾಡಿ ನಾನು ಒಳಗೆ ಹೊರಗೆ ಸುಳಿದಾಡತೊಡಗಿದೆ. 'ಬರುವದು ಸ್ವಲ್ಪ ತಡವಿದ್ದರೆ ಹಾಗೆಯೇ

ತಿಳಿಸಬೇಕಿತ್ತು ? ಸುಮ್ಮನೇ ಮಧ್ಯಾಹ್ನಕ್ಕೆಂದು ಏತಕ್ಕೆ ಹೇಳಬೇಕು ?' ಎಂದು ನಿರಾಶೆಯಿಂದಲೂ ಆ ಮೂಲಕ ಉಂಟಾದ ಸ್ವಲ್ಪ ಸಿಟ್ಟಿನಿಂದಲೂ ನಾನು ಒಳಗೊಳಗೇ ಕುದಿಯಹತ್ತಿದೆನು. "ಈಗಲೇ ಏತಕ್ಕೆ ಹಾಸಿಟ್ಟೆರಿ ? ನೀವು ಹುಚ್ಚು ಮಂದಿ !" ಎನ್ನುತ್ತ ಹಾಸಿದ್ದನ್ನು ಗೂಡಿಸಹತ್ತಿದೆ.

ಅಂತೂ ಇಂತೂ ಸಾಯಂಕಾಲವಾಯಿತು; ರಾತ್ರಿಯೂ ಆಯಿತು. ಹೊರಗೆಲ್ಲ ಆಕಾಶದಲ್ಲಿ ಮೋಡ ಮುಸುಕಿತು; ಸುರಿಮಳೆಯು ಸುರಿಯುವಂತೆ ತೋರಿತು. ಇತ್ತ ನನ್ನೊಳಗೂ ಚಿಂತೆಯ ಕಾರ್ಮೋಡ ಕವಿದು, ಅಳುವಿನ ಸುರಿಮಳೆಯೆಲ್ಲಿ ಸುರಿಯು-ವದೋ ಎಂದು ಎನಿಸಹತ್ತಿತು. ಮುಗಿಲಲ್ಲಿಯೆಂದರೆ ಆಗಾಗ ಚುಣುಕುತಲಿದ್ದ ಕೋಲ್ಮಿಂಚಿನ ಬೆಳಕೇ ಹೊರತು, ಚಿಕ್ಕೆ-ಚಂದ್ರಮರ ಬೆಳಕಿರಲಿಲ್ಲ; ನೋಡಿದರೆ ಆಗ ಹುಣ್ಣಿವೆಯು ತೀರಾ ಹತ್ತಿರ ಬಂದಿತ್ತು. ನನ್ನಂತರಂಗದಲ್ಲಿ ಸಹ ನಿರಾಶೆಯ ಕಾರ್ಮೋಡದ ಹಿಂದೆ ಆಸೆಯ ಮಿಂಚು ಮಿಂಚುತ್ತಿತ್ತು. ಹೊರಗೆಲ್ಲ ವಿದ್ಯುದ್ದೀಪಗಳು ಮಿಣುಗಿದವು. ದಾರಿಗಳೆಲ್ಲವೂ ಬೆಳ್ದಿಂಗಳಿಂದ ತುಂಬಿದಂತೆಯೇ ಕಂಡವು. ಅಷ್ಟರಲ್ಲಿ ಗುಡುಗು-ಮಿಂಚು ಬಹಳವಾಗಿ, ಒಮ್ಮೆಲೇ ಆರ್ಭಟಿಸುತ್ತಲೇ ಬಂದಿತು ಮಳೆಯು; ಕಲ್ಲು ಸುರಿದಂತೆ ಸುರಿಯಿತು. ರಾತ್ರಿಯ ಹತ್ತು ಗಂಟೆಯವರೆಗೆ ಎಲ್ಲೆಲ್ಲಿಯೂ ನೀರೇ ನೀರಾಯಿತು. ಕಡೆಗೊಮ್ಮೆ ಮೋಡದೊಳಗಿನ ನೀರೆಲ್ಲ ಬಸಿದು ಹೋಯಿತೆನ್ನುವಂತೆ ಮಳೆಯು ನಿಂತಿತು. ಅದೊಂದು ನನ್ನ ಸುದೈವ. ಅಲ್ಲಲ್ಲಿ ಚಿಕ್ಕೆಗಳು ಕಳ್ಳನಂತೆ ಒಂದೊಂದಾಗಿ ಹಣಿಕಿ-ಮಿಣುಕಾಡಹತ್ತಿದವು. ಮೆಲ್ಲಗೆ ಚಂದ್ರನೂ ಕಾಣಹತ್ತಿದನು. ಆದರೆ ನನ್ನ 'ಚಂದ್ರಮ'ನು ಇನ್ನೂ ಕಾಣಲಿಲ್ಲವಲ್ಲ ? ಕೆಲಸವೂ ಊಟವೂ ಬೇಜಾರವಾದವು. ನಾನು ಊಟ ಬಿಟ್ಟರೆ ಮನೆಗೆ ಬಂದ ಅಕ್ಕ-ಭಾವ ಮೊದಲಾದವರೇಕೆ ಬಿಟ್ಟಾರು ? ಚಿಂತೆಯು ನಸುವಾದರೂ ಕಡಿಮೆಯಾಗಲಿಯೆಂದು

ಎಲ್ಲರಿಗೂ ಊಟಕ್ಕೆ ಹಾಕತೊಡಗಿದೆ. ಆದರ ಪುಣ್ಯವಾಗಲೇ ಫಲಿಸಿತು. ಭಾವನ ಗೆಳೆಯ ಬಂದು, 'ಹುಡುಗ ಬಂದಿದ್ದಾನೆ!' ಎಂದು ಹೇಳಿದ. ಆದರೇನು ಪ್ರವಾಸದ ಶ್ರಮದಿಂದಲೂ ಮಳೆಯಾಗಿದ್ದ ಮೂಲಕ ಬಿಟ್ಟ ಕೆಟ್ಟ ಚಳಿಯಿಂದಲೂ ಕಂಗೆಟ್ಟವನಾದುದರಿಂದ, ಮರುದಿವಸ ಮುಂಜಾನೆ ಬೆಳಕಿನಲ್ಲಿ ನನ್ನನ್ನು ನೋಡಲು ಬರುವದಾಗಿ ಹೇಳಿದನು. ನಮ್ಮಕ್ಕನಿಗೆ ಒಳ್ಳೆಯ ಉಲ್ಲಾಸ, ಹೊಸ ಭಾವನನ್ನು ನೋಡಲಿಕ್ಕೆ. ಆಕೆ ಬಂದವರ ಕೂಡ, 'ನಮ್ಮ ತಂಗಿಯನ್ನು ನಾಳೆ ಬೆಳಕಿನಲ್ಲಿ ನೋಡಲೊಲ್ಲರೇಕೆ, ಆದರೆ ಅವರನ್ನು ನಾವು ರಾತ್ರಿಯಿದ್ದರೂ ಈಗಲೇ ಯಾವ ಆಂತಕವೂ ಇಲ್ಲದೆ ನೋಡಬೇಕೆನ್ನುತ್ತೇವೆ! ಒಂದೆ-ರಡು ಗಳಿಗೆ ಈಗಲೇ ಕರಕೊಂಡು ಬನ್ನಿರಿ!' ಎಂದಳು. 'ಅವರ'ಗೂ ಸಹ ಈ ಮಾತು ರುಚಿಸಿತೇನೋ, ಬಂದೇ ಬಿಟ್ಟರು. ನನ್ನಿಂದಲೇ ಬೇರೆ ಫಲಾಹಾರವನ್ನು ತಯಾರಿಸಹಚ್ಚಿ, ಅದನ್ನೊಯ್ದು ಅಕ್ಕ ಹೊರಗೆ ಕೊಟ್ಟಳು. ಫಲಾಹಾರ ತಿನ್ನಲಿಕ್ಕೆ ಹೊಸ ಅಳಿಯ-ದೇವರಿಗೆ ಕತ್ತಲೆಯಾದೀತೆಂಬ ಭಯ ತೋರಿಸಿದಂತೆ ನಟಿಸುತ್ತ, ಇನ್ನೂ ೩-೪ ದೀಪಗಳನ್ನು ಹಚ್ಚಿ, ಒಂದೆರಡು ಗೋಡೆಗೆ ಹಾಕಿ, ಒಂದೆರಡು ಅವರೆದುರಿಗಿಟ್ಟಳು. ಇದನ್ನು ನೋಡಿ ನನಗೊಳ್ಳೆಯ ನಗು ಬಂದಿತು. ಫಲಾಹಾರವಾಯಿತು. ಇನ್ನೇನು, ಮೂವರೂ ಎದ್ದು ಸಿನೇಮಾಕ್ಕೆ ಹೊರಟರು. ನನ್ನನ್ಯಾರೂ ಆಗ ಕೇಳಲೇ ಇಲ್ಲ. ಸಿನೇಮಾ ಬಿಟ್ಟ ಬಳಿಕ, ಭಾವ ಒಬ್ಬರೇ ಮನೆಗೆ ಬಂದರು. 'ಅವರೂ' 'ಗೆಳೆಯ'ನೂ ಗೆಳೆಯನ ಮನೆಗೆ ಹೋದರಂತೆ.

ಮರುದಿವಸ ನಾವೆಲ್ಲರೂ ನಸುಕಿನಲ್ಲೆದ್ದು ಮನೆಯಲ್ಲಿ ಕಸ-ಗೂಡಿಸಿದೆವು. ಅಕ್ಕನ ಆಗ್ರಹಕ್ಕೆ ಹಾಕಿಕೊಂಡೆನೇನೋ ಅನ್ನುವಂತೆ ನಾನು 'ಸಾರಸ್ವತ' ಫ್ಯಾಶನ್ನಿನ ಹೆಣಿಲು ಹಾಕಿಕೊಂಡೆನು. ಅಷ್ಟರಲ್ಲಿ ಸೂರ್ಯೋದಯವಾಯಿತು. ನನ್ನ 'ಸೂರ್ಯ'ನೂ ನಮ್ಮ ಮನೆಯಲ್ಲಿ ಮೂಡುವ ಹೊತ್ತು ಸಮೀಪಿಸಿತು. ಗುಲಾಬಿ ಬಣ್ಣದ ಪತ್ತಲ-

ವನ್ನುಟ್ಟು, ಮುಗಿಲುಬಣ್ಣದ ರೇಶಿಮೆಯ ಜರಿಯಂಚಿನ ಬ್ಲಾವುಜ್ ಹಾಕಿಕೊಂಡಿದ್ದೆನು. ಬರಿಯ ನನ್ನ ಹೆಳಲನ್ನು ನೋಡಿದರೇನೇ ನನ್ನನ್ನಾಗ 'ನಾಗವೇಣಿ'ಯೆಂದು , ಕರೆಯಬಹುದಾಗಿತ್ತು. ಕಿವಿಯಲ್ಲಿ ಮುತ್ತಿನವೆರಡು ಬೆಂಡೋಲೆಗಳು, ಕೊರಳಲ್ಲಿಯೊಂದು ಏಕಾವಳಿ. ಇದು ನನ್ನ ದಿನದ ಪದ್ಧತಿಯೇ. ಅಂತೂ ಆಯಿತು ನನ್ನ ಶೃಂಗಾರ. ಗೆಳೆಯನ ಕೂಡ ನನ್ನ 'ಅವರೂ' ಬಂದರು. ನನಗೆ ತಮ್ಮೆದುರಿಗೆ ಬರಹೇಳಿ ಕಳು ಹಿದರು. ನನ್ನಲ್ಲಿ ತುಂಬಿದ ಉತ್ಸಾಹ ಉಲ್ಲಾಸಗಳು ಆಗ ಒಮ್ಮೆಲೇ ಮಾಯವಾದವು. ಎದೆಯು ಡವಡವ ಹಾರಹತ್ತಿತು; ಮೈಯೆಲ್ಲ ಬೆವರಡರಿತು. ನಾಚಿಕೆಯು ನನ್ನ ಮೇಲೆ ಸಂಪೂರ್ಣವಾಗಿ ತನ್ನ ಮುಸುಕನ್ನು ಹಾಕಿಬಿಟ್ಟಿತು. ಗಾಬರಿಯಾದಂತಾದೆ. ಹೇಗೋ ಬಂದು ಅಕ್ಕ-ಭಾವ ಇವರ ನಡುವೆ ಕುಳಿತೆ. 'ಅವರು' ನನ್ನನ್ನು ನೋಡಿಯೂ ಆಯಿತು. ನಾನೂ ನಡುನಡುವೆ ಸ್ವಲ್ಪ ಕಳುವಿನಿಂದಲೇ ಓರೆನೋಟ ಚೆಲ್ಲಿ ನನ್ನ ಭಾವೀ ' ಅವರನ್ನು ' ನೋಡುತ್ತಿದ್ದೆ. ಹುಡು ಗಿಗೆ ಓದಹೇಳಿರೆಂದರು. ಮೊದಲು ಕನ್ನಡ ಓದಿದೆ; ಆ ಬಳಿಕ ಮರಾಠಿಯೂ ಆಯಿತು; ಮರಾಠಿಯೆಂದರೆ, ವಿದ್ಯಾಹರಣ ನಾಟಕ ದೊಳಗಿನ ಕಚ-ದೇವಯಾನಿಯರದೊಂದು ದೃಶ್ಯವಿದ್ದಿತು. ಇಂಗ್ಲೀಷು ಓದಿಸಿರೆಂದರು. ಅಕ್ಕ ಚಟಕ್ಕನೆದ್ದು ಒಂದು ಪುಸ್ತಕ ತೆಗೆದು, ಅದರೊಳಗಿನದೊಂದು ಪಾಠ ಓದಹೇಳಿದಳು. ಆದೂ ನನ್ನ ಪಾಲಿಗೆ, ಶೇಕ್ಸಪಿಯರನ 'ಮರ್ಚಂಟ್ ಆಫ್ ವೇನಿಸ' ದೊಳಗಿನ ಆ್ಯಂಟೋ-ನಿಯೋನೊಡನೆ ಪೋರ್ಶಿಯಾ ಮಾಡಿದ ಭಾಷಣವೇ ಇರಬಾರದೇಕೆ? ಎಲ್ಲರಿಗೂ ರುಚಿಸುವಂತೆ ಒಳಗೊಳಗೆ ನನಗೂ ರುಚಿಸಿತು. ಹೇಗಿದ್ದರೂ ಓದಲೇಬೇಕಾದ್ದರಿಂದ ಓದಿದೆ. ' ಹಾಡಲಿಕ್ಕೆ ಬರುವದೆ? ' ಎಂದರು. ನನ್ನ ಮುಖ ನೋಡಿ ನಮ್ಮಕ್ಕ 'ಬರುವದು, ಹಾಡಲು ನಾಚಿಕೊಳ್ಳು ವಳು ' ಎಂದಳು. ' ಹಾಡಲಿಕ್ಕೆ ಬರುತ್ತಿರಬೇಕೆಂದು ಓದುವಾಗ ಕೇಳಿದ ಆಕೆಯ ಇಂಪು ಧ್ವನಿಯ ಮೇಲಿಂದ ನನಗಾಗಲೇ ಅನಿಸಿತು' ಎಂದು ಅವರ ಕಡೆಯಿಂದ ಆಕಾಶವಾಣಿಯಾಯಿತು. ನಾನು ತಮ್ಮ

ಮನಸಿಗೆ ಬಂದಿರುವೆನಾಗಿ ಹೇಳಿ, ನನ್ನ ಕೈಯಿಂದಲೇ ಸಾಯಂಕಾಲಕ್ಕೆ ಅಡಿಗೆ ಮಾಡಿಸಹೇಳಿದರು; ಏಕೆಂದರೆ, ನಾನು ಇಂಗ್ಲೀಷು ಕಲಿತವಳು. ಅಡಿಗೆಯ ಪರೀಕ್ಷೆಯೂ ಆಯಿತು. ಉತ್ತೀರ್ಣಳಾದೆ. 'ನೀರು ಹೊರುವ ಪರೀಕ್ಷೆ ಮಾಡುವಿರೇನು?' ಎಂದು ಭಾವ 'ಅವರಿ'ಗೆ ನಗೆ ಯಾಡಿದರು. 'ನಾವೂ ನಿಮ್ಮನ್ನು ಪರೀಕ್ಷಿಸುವವರಿದ್ದೇವೆ, ಕೇರಂ ಬೋರ್ಡಿನಲ್ಲಿ' ಎಂದು ನಮ್ಮ ತಂದೆ ನಗೆಯಾಡಿದರು. ಎಲ್ಲರೂ ತಾಂಬೂಲ ತಿಂದ ಬಳಿಕ 'ಅವರು' ಗೆಳೆಯರೊಡನೆ ಹೊರಟರು. ಭಾವ ಕಳಿಸಲಿಕ್ಕೆಂದು ಮುಂಚೆಯ ಬಾಗಿಲವರೆಗೆ ಹೋದರು. ಅಷ್ಟರಲ್ಲಿ ಅಕ್ಕ, 'ಅವರು' ಸಾಕ್ಸುಗಳನ್ನೂ ಒಂದು ಪೇಪರನ್ನೂ ಮರೆತು ಹೋಗಿದ್ದಾರಾಗಿ ಹೇಳಿದಳು. ನನ್ನ 'ಅವರು' ಅವಳ ಮಾತನ್ನು ಕೇಳಿಯೂ ಕೇಳದಂತೆ ನಟಿಸಿ ಹೋಗಿಬಿಟ್ಟರು. ಓಹೋ, ಇನ್ನೊಮ್ಮೆ ಭಾವೀಪತ್ನಿಯನ್ನು ಆ ನಿಮಿತ್ತ ಮಾಡಿ ನೋಡಬರುವವರಿರುವ-ರೇನು ?—ಎಂದು ಗುಣಗುಣಿಸುತ್ತ ಒಳಕ್ಕೆ ಹೋದಳು. ತಮಾಷೆ ನೋಡಿರಿ, ಅವನ್ನಾರೂ ತೆಗೆಯಲೇ ಇಲ್ಲ; ರಾತ್ರಿ ನನ್ನ ಹಾಸಿಗೆ ಹಾಸಿಕೊಳ್ಳಲೇಬೇಕಾಯಿತಾದ್ದರಿಂದ, ನನ್ನ ಪಾಲಿಗೇ ಆ ಕೆಲಸವು ಬಂತು. ಎಲ್ಲರಿಗೂ, ಆ ಸಾಮಾನುಗಳನ್ನು ನಾನೇ ಕದ್ದಿಟ್ಟೆನೆಂತಲೂ 'ಅವರೇ' ಇಟ್ಟುಹೋದರೆಂತಲೂ ಇಬ್ಬರೂ ಏನೇನು ಮಾಡಿದರೋ ಎಂತಲೂ ಹಾಸ್ಯಮಾಡಿ ನಗಲಿಕ್ಕೆ ಇದೊಂದು ನಿಮಿತ್ತವು ಸಿಕ್ಕಿತು. ಮರುದಿನ ಬೆಳಗಾಗುತ್ತಲೆ ಇನ್ನೂ ಮನೆಯೊಳಗಿನ ಕಸವು ಸಹ ಹೋಗಿರಲಿಲ್ಲ, ಆಗಲೇ ಬಂದುಬಿಟ್ಟರಲ್ಲ ಅಳಿಯದೇವರು! ಮತ್ತೆ ಉಪ್ಪಿಟ್ಟಿನ ಪರೀಕ್ಷೆಯಾಗಲಿಯೆಂದರು. ಉತ್ತೀರ್ಣಳಾದೆನೆಂದು ಬೇರೆ ಹೇಳಬೇಕೇ? ಹೊರಡಲಿಕ್ಕೆ ಎದ್ದರು, ಇನ್ನೂ ಅವಕಾಶವಿದ್ದಾಗಲೆ. ನಮ್ಮ ಭಾವನವರು ಆಗ 'ಹೋಗುವಿರಂತೆ ಬನ್ನಿರಿ' ಎಂದು ಅವರನ್ನು ಅಟ್ಟದ ಮೇಲಣ ಒಂದು ಕೋಣೆಗೆ ಕರೆದೊಯ್ದು ಬಾಗಿಲು ಇಕ್ಕಿಕೊಂಡರು; ಇವರದೊಂದು ಸರಳಸ್ವಭಾವ —ಯಾರೇ ಅಪ-

ರಿಚಿತರಿರಲಿ, ಅವರೊಡನೆ ತಾವು ತಮ್ಮವರೇ ಏನೋ ಅನ್ನುವಂತೆ ಮನಬಿಚ್ಚಿ ಹರಟೆ ಹೊಡೆಯುತ್ತ ಕುಳಿತುಕೊಳ್ಳುವದು—ಅದರಂತೆ ಅಂದು ನನ್ನ ' ಅವರ 'ನ್ನೂ ಕರೆದೊಯ್ದರು ಭಾವಯ್ಯನವರು. ನನಗನಿಸಿತು ಅವರು ನನ್ನ ವಿಷಯವನ್ನೇ ಮಾತನಾಡುತ್ತಿರಬಹುದೆಂದು. ಏಕೆಂದರೆ, ಕನ್ಯೆಯನ್ನು ನೋಡಲು ಬಂದ ಹೊಸ ಅಳಿಯನೊಡನೆ ಇನ್ನೇನು ಮಾತನಾಡುವರು ? ಕೇಳಬೇಕೆಂಬ ಬಲವಾದ ಆತುರತೆಯಿಂದ ಮನಸು ಹಾತೊರೆಯಹತ್ತಿತು. ಮುಂಜಾನೆಯ ಹೊತ್ತಾದುದರಿಂದ ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದ್ದರು. ನಾನು ಮೆಲ್ಲಗೆ ನುಸುಳಿದವಳೇ ಅಟ್ಟವನ್ನೇರಿದೆ; ಕಾಣಲಿಲ್ಲ. ಕಿವಿಗೊಟ್ಟು ಕೇಳಿದೆ; ನನ್ನ ವಿಷಯವೇ ಇರಬೇಕೆನಿಸಿತು. ನಾನು ಕಿವಿಗೊಟ್ಟಾಗ ಭಾವಯ್ಯನವರೇ ಮಾತನಾಡುತ್ತಿದ್ದರು.

ಭಾವನವರು :—ಹೋಗುವ ಮೊದಲು ಬೇಕಾದರೆ ಇನ್ನೊಮ್ಮೆ ಪರೀಕ್ಷಿಸಬಹುದಲ್ಲವೇ ಚೆನ್ನಾಗಿ ?

(ನಾನು ಆಶ್ಚರ್ಯದಿಂದ, ಏನು ನನ್ನ ಪರೀಕ್ಷೆ ಇನ್ನೊಮ್ಮೆಯೆ? ಇನ್ನೂ ಏನೇನು ಉಳಿದಿದೆಯೊ ? ಎಂದುಕೊಂಡೆ.)

ಅವರು :—ನಿನ್ನೆ ನೋಡಿದಾಗಂತೂ ಬಲಗಣ್ಣು ಕುರುಡಾಗಿ ಕಂಡಿತು.

(ಏನು ? ನನ್ನ ಕಣ್ಣು ಕುರುಡೆ ? ನೋಡುವವರ ಕಣ್ಣುಗಳೇ ಕುರುಡಾಗಿರಬಹುದು! ಮನೋಹರವಾದ ನನ್ನ ಕಣ್ಣು ಕುರುಡಂತೆ ಕುರುಡು !)

ಭಾವನವರು :—ದೃಷ್ಟಿಯು ಚೆನ್ನಾಗಿದೆ; ಬೇಕಾದರೆ ಸಂಜೆಯಾದ ಮೇಲೆ ಓಡಾಡಿಸಿ ನೋಡಬಹುದು.

(ಇದೇನು ? ಅಂತೂ ದೃಷ್ಟಿಯು ಚೆನ್ನಾಗಿರುವದೆಂದು ಹೇಳುವ ಭರದಲ್ಲಿ ನನ್ನ ಕಣ್ಣು ಕುರುಡೆಂದು ಸಹಜವಾಗಿಯೇ ಒಪ್ಪಿದಂತಾಯಿತಲ್ಲ ?)

ಅವರು:—ಅಲ್ಲದೆ ಒಂದು ಕಾಲು ಕುಂಟಿರಬೇಕೆಂದು ನಿನ್ನೆ ನಡಿಗೆಯ ಮೇಲಿಂದಲೇ ನನಗನಿಸಿತು.

(ಅವ್ವಯ್ಯಾ, ಇದೇನು ? ನಾನು ಕುಂಟಿಯೂ ಆದೆನೆ? ಎಲ್ಲಿ, ಎರಡೂಕಾಲು ಚೆನ್ನಾಗಿರುವವಲ್ಲ? ಏನು ನನ್ನ ಹಣೆಬರಹವಾಯಿತಿದು?)

ಅವರು:—ಕೂದಲು ಬಿರುಸಾಗಿಯೂ ದಪ್ಪವಾಗಿಯೂ ಕಂಡವು.

(ಆ ! ನನ್ನ ಕೂದಲು ದಪ್ಪೇ ? ಕಳೆದ ವರುಷ ಕಟ್ಟಿನ ಜ್ವರದಿಂದ ಬಿದ್ದಿದ್ದೆ, ಸತ್ತುಸತ್ತು ಉಳಿದಿದ್ದೆ—ಪುನಃ ತಾಯಿಯ ಹೊಟ್ಟೆಯಿಂದ ಹುಟ್ಟಿ ಬಂದಂತಾಯಿತು. ಆಗ ಕೂದಲು ಉದುರಿದವು. ಮೊದಲು ಮೊದಲು ಸ್ವಲ್ಪ ಬಿರುಸು ಇದ್ದವು. ಈಗಂತೂ ಬಹಳೇ ಮೆತ್ತಗಾಗಿವೆ. ರೇಶಿಮೆಯನ್ನು ಸಹ ನಾಚಿಸುವಷ್ಟು ಮಿದುವಾಗಿದ್ದ ಈಗಿನ ನನ್ನ ಕೂದಲು ಬಿರುಸಂತೆ ! ದಪ್ಪವಂತೆ !! ಬೇಡವೇ ಬೇಡ; ಇಂಥಾ ಪರಿಯಿಂದ ಈ ಮಹಾರಾಯನನ್ನು ನಾನು ಮದುವೆಯಾಗಲೇ ಒಲ್ಲೆನು. )

ಅವರು:—ಬುದ್ಧಿಯೇನೋ ಚುರುಕು ಕಾಣುವದು.

(ಓಹೋ ! ನನ್ನ ಬುದ್ಧಿ ಮಾತ್ರ ಚುರುಕು ಎಂಬಷ್ಟು ಒಪ್ಪುವನೆ? ನನ್ನನ್ನು ಹೊಗಳುತ್ತಿದ್ದವನಂತೇನೋ ಸುಮ್ಮನೇ ನಡೆಸಿದ್ದಾನಷ್ಟೇ!)

ಭಾವನವರು:—ಅಹುದು. ಬುದ್ಧಿಯು ಬಹಳೇ ತೀಕ್ಷ್ಣವುಂಟು.

ಅವರು:—ಧ್ವನಿಯೊಂದು ನನ್ನ ಮನಸಿಗೆ ಬಂದಿತು; ಬಾಯಿ ತೆಗೆದರೆ ಹುಲಿಯು ಗುಡುಗುಹಾಕಿದಂತಾಗುವದು.

(ಏನು, ನನ್ನ ಧ್ವನಿಯು ಹುಲಿಯ ಗರ್ಜನೆಯಂತಿದೆಯೆ? ಅಷ್ಟು ಕರ್ಕಶವೆ ? ಆಗಲಿ—ನನ್ನ ಧ್ವನಿಯು ಕರ್ಕಶವೇ ಆಗಲಿ, ಹೇಗೇ ಇರಲಿ; ಮತ್ತೆ ನಿನ್ನೆ, ಬರೀ ನನ್ನ ಓದಿನ ಮೇಲಿಂದಲೇ ನನ್ನ ಧ್ವನಿಯನ್ನು ಗುರುತಿಸಿ, ಅದು ಬಹಳೇ ಇಂಪಿರಬೇಕೆಂತಲೂ,

ಹಾಡಲಿಕ್ಕೆ ನನಗೆ ಚೆನ್ನಾಗಿ ಬರುತ್ತಿರಬೇಕೆಂತಲೂ ತಮಗನಿಸಿತೆಂದು ಹೇಳಿದ್ದರಲ್ಲ ? ಅಂದರೆ ಇಂಪು-ಕರ್ಕಶಗಳ ಭೇದವೇ ಇಲ್ಲೇನೋ ಇವರಿಗೆ! ಇವರಿಗೆಲ್ಲಿಯೋ ಹುಚ್ಚು ಹಿಡಿದಂತೆ ಕಾಣುತ್ತದೆ—ನಿಜ, ಇವರಿಗೆ ಹುಚ್ಚೇ ಹಿಡಿದಿದೆ.)

ಭಾವನವರು ಸುಮ್ಮನಿದ್ದರು.

ಅವರು:—ವಯಸ್ಸೂ ಸ್ವಲ್ಪ ಹೆಚ್ಚೇ ಇದ್ದಂತಿದೆ.

ಭಾವನವರಿಂದ ಉತ್ತರ ಬರಲಿಲ್ಲ.

(ನನಗೆ ವಯಸ್ಸು ಹೆಚ್ಚಾಗಿದೆಯೆ ? ಇನ್ನೂ ೧೪ ರಲ್ಲಿ ಇರುವಾಗ ವಯಸ್ಸು ಹೆಚ್ಚಂತೆ ! ತಾವೇ ನನಗಿನ್ನೂ ತಕ್ಕವರಾಗದೆ, ಹಿರಿಯರೇ ಆದಾರು.... ಇಷ್ಟೆಲ್ಲ ಗೋಂದಲವೇಕೆ ? ಇದೇನು, ಭಾವನವರು ಪ್ರತಿಯೊಂದು ಮಾತಿನಲ್ಲಿ ಸೋಲುತ್ತಿರುವರಲ್ಲ ? ಅವರಿಗೆ' ನಮ್ಮ ಹುಡುಗಿಯಂತೂ ಹೀಗೆ ಇದೆ, ಬೇಕಾದರೆ ಮಾಡಿಕೊಳ್ಳಿರಿ, ಇಲ್ಲವಾದರೆ ಬಂದ ಹಾದಿಗೆ ಸುಂಕವಿಲ್ಲವೆಂದು ಹೋಗಿರೆ'ಂದು ಹೇಳಿ ಕಳಿಸಿಬಿಡಬಾರದೇ ? ಭಾವನಿಗೂ ಎಲ್ಲಿಯೋ ಹುಚ್ಚು ಹಿಡಿದಂತೆ ಕಾಣುವದು .)

ಅವರು :—ಕಳೆದ ವಾರ ಪಂಢರಪುರಕ್ಕೆ ಹೋಗಿ ಬಂದೆನು. ನನ್ನ ಮನಸ್ಸಿಗೆ ಬಂದಿದೆ. ನನ್ನ ಮನಸ್ಸಿಗೆ ಬಂದು ಉಪಯೋಗವಿಲ್ಲ, ನಮ್ಮ ತಾಯಿಯವರು ನೋಡಿ ಸಮ್ಮತಿಸಬೇಕು; ಅಂದರೆ ಕೆಲಸವು ಪೂರ್ಣವಾದಂತಾಯಿತು.

(ಹಾಗಾದರೇನು ? ನನ್ನನ್ನು ವರಿಸುವ ಮಾತೇ ದೂರ. ಪಂಢರಪುರದ ಹುಡುಗಿ ಮನಸ್ಸಿಗೆ ಬಂದಿದೆಯಂತೆ ! ಹಾಗಾದರೆ ನನ್ನನ್ನು ನೋಡಲಿಕ್ಕೆ ಏಕೆ ಬರೋಣವಾಯಿತು ?)

ಅವರು :— ಮೈ-ಕೈಯಿಂದ ದುಂಡಗಿದ್ದು, ಗಟ್ಟಿಮುಟ್ಟಿಯಿದೆ; ನೀಳವಾದ ಕಣ್ಣುಗಳಿವೆ.

(ನನ್ನ ಮೈ-ಕೈಗೇನಾಗಿದೆ? ನಾನೇನು ಗಟ್ಟಿಮುಟ್ಟಿ ಇಲ್ಲವೇ? ಕಳಿತ ಕವಳೀ ಹಣ್ಣಾಗಿವೆ ನನ್ನ ಕಣ್ಣುಗಳು; ನನ್ನ ಕಣ್ಣಲ್ಲಿದ್ದಷ್ಟು ತೇಜವು ನಮ್ಮ ಮನೆಯಲ್ಲಾರಿಗೂ ತನ್ನ ಮಕ್ಕಳಲ್ಲಿ ಇಲ್ಲವೆಂದು ನಮ್ಮ ತಾಯಿ ಹೇಳುವರಲ್ಲ?)

ಅವರು :- ನೂರರಲ್ಲಿ ತೊಂಬತ್ತೊಂಬತ್ತು ಪಾಲು ನಮ್ಮ ತಾಯಿಯ ಒಪ್ಪಿಗೆ ಆ ಮಾತಿಗೆ ಸಿಕ್ಕುವದೆಂಬ ಆಸೆ ನನಗಿದೆ.

(ಹಾಗಾದರೆ ಆ ಹುಡುಗಿಯನ್ನೇ ಲಗ್ನ ಮಾಡಿಕೊಳ್ಳುವರಲ್ಲವೇ? ಮಾಡಿಕೊಳ್ಳಲೊಲ್ಲರೇಕೆ! ಆದರೆ ಸುಮ್ಮಸುಮ್ಮನೆ ನನಗೆ ಕುರುಡಿ-ಕುಂಟಿಯೆಂದು ಹೆಸರಿಡುವದು ಏನು ಕಾರಣ? ಇತ್ತ ಮದುವೆ ಮಾಡಿಕೊಳ್ಳುವ ಹಾಗೂ ಇಲ್ಲ, ಅತ್ತ ಸುಮ್ಮನಾಗಿಯೂ ಇರುವಂತಿಲ್ಲ! ಇದೇನು ಅಸಹ್ಯವಿದು ?)

ಭಾವನವರು :— ವಿಚಾರ ಮಾಡಿ ನೋಡಿರಿ; ಮನಸಿಗೆ ಬಂದಂತೆ ಬಗೆಹರಿಸಿದರಾಯಿತು.

(ಬಗೆಯೇನೆಂದು ಹರಿಸುವರು ? ಇಷ್ಟೇಕೆ ನಮ್ಮ ಭಾವನವರು ಅವರಿಗೆ ಹೇಳಿಕೊಳ್ಳಹತ್ತಿರುವರೋ ಏನೋ! ನಮ್ಮ ಭಾವನವರೂ ಎಲ್ಲಿಯೋ ಅರೆಹುಚ್ಚರೇ ಇದ್ದಾರೆ—ಇನ್ನೆಲ್ಲಿಯೂ ನನಗೆ ವರ ಸಿಗುವ-ದಿಲ್ಲೆಂದು ತಿಳಿದಿದ್ದಾರೆ!)

ಅವರು :— ಒಳ್ಳೇದು ನೋಡುವಾ. ಒಂದು 'ಕಾರನ್ನೇ' ಕೊಳ್ಳಬೇಕೆಂದು ನನ್ನ ಮನಸ್ಸಿನಲ್ಲಿದೆ; ಅಪ್ಪಣೆ ಕೊಡಿರಿ, ಹೋಗಿ ಬರುವೆ. ವಾರವೊಂದು ಕಳೆದ ಬಳಿಕ ನಮ್ಮ ತಾಯಿಯನ್ನು ಕರಕೊಂಡು ಬರುವೆನು.

(ಓಹೋ,ಕಾರೇನು ಪಂಢರಪುರದ ಹೆಂಡತಿಯೊಡನೆ ಸಮುದ್ರದ ದಂಡೆಗೆ ತಿರುಗಾಡಲಿಕ್ಕೆ ಹೋಗಲಿಕ್ಕೆಂದೇನು ? ಹಾಗಾದರೆ ತಾಯಿಯನ್ನು ಕರಕೊಂಡು ಇಲ್ಲಿಗೇಕೆ ಮತ್ತೆ ಬರುವದಂತೆ?........ ಈ ಕುರುಡಿಕುಂಟಿಯ ಪರಿಹಾಸ ಮಾಡಲಿಕ್ಕಲ್ಲವೇ ?)

ಭಾವ :— ಆಗಲಿ, ಹೋಗಿಬನ್ನಿರಿ, ನಮಸ್ಕಾರ. ಸುರಕ್ಷಿತ ಮುಟ್ಟಿದ್ದಕ್ಕೆ ಪತ್ರ ಬರೆಯಿರಿ.

ಇನ್ನು ಹೊರಬೀಳುವರೆಂದು ತಿಳಿದು ಮೆಲ್ಲನೆ ಪಾವಟಿಗೆಗಳನ್ನಿಳಿದು ಅಡಿಗೆಯ ಮನೆಯ ಕಡೆಗೆ ಓಡಿದೆನು.

ಅವರು ಹೋದರು. ಮಧ್ಯಾಹ್ನದ ನಾಲ್ಕು ಗಂಟೆಯಾಗಿತ್ತು. ನಾವೆಲ್ಲರೂ ಕೂಡಿ ಚಹಾ ಕುಡಿಯುತ್ತ ಕುಳಿತಿದ್ದೆವು. ಬಂದಿತಲ್ಲ ಸವಾರಿಯು ಮತ್ತೆ ನಮ್ಮೆದುರಿಗೆ ಧುತ್ತೆಂದು! ನಾನು ಫಕ್ಕನೆದ್ದು ಓಡಿದೆ. ನಮ್ಮಕ್ಕ ಕೇಳಿದಳು: "ಏಕೆ ಅಳಿಯದೇವರೇ? ಮೋಟಾರು ತಪ್ಪಿತೇ ?" "ಅಹುದು." ಎಂದರು. "ಹಾಗಾದರೆ ಇಷ್ಟೊತ್ತು ಎಲ್ಲಿದ್ದಿರಿ?" ಎಂದು ಭಾವ ಆತುರದಿಂದ ಕೇಳಿದರು. "ಗೆಳೆಯನಲ್ಲಿ" ಎಂದರು.

ಈ ಬಾರಿ ಮಾತ್ರ "ಅವರು" ಹೊರಗೆ ಎದುರಿಗೆ ಇರುಇರುವಾಗಲೇ ನನ್ನ ಭಾವ ನನ್ನ ಕೈಯಿಂದಲೇ ಹಾಸಿಸಿದರು, ಚಹಾ ಕೊಡಿಸಿದರು, ದೀಪಗಳನ್ನಂಟಿಸಹೇಳಿದರು, ಮತ್ತೇನೇನೋ ಕೆಲಸಗಳನ್ನು ಹೇಳಿ ಅವರೆದುರಿನಿಂದ ನಾನು ಏಳೆಂಟು ಬಾರಿ ಹಾಯ್ದು ಹೋಗುವಂತೆ ಮಾಡಿದರು. ನಿಜ! ಮುಂಜಾನೆ ಕುರುಡಿ-ಕುಂಟಿ ಅಂದದ್ದಕ್ಕೆ ಭಾವನಿಗೆ ನೋವಾಗಿರಬೇಕು; 'ಅವರಿ'ಗೂ ಪರೀಕ್ಷೆ ಮಾಡಬೇಕೆನಿಸಿರಬೇಕು; ಅಂತೇ ಅವರೂ ಬಂದರು; ಇವರೂ-ನಾನು ಕಿವಿಗೊಟ್ಟಾಗ ನಡೆದ ಮಾತಿನಂತೆ ಸಂಜೆಯಾದ ಬಳಿಕ ನನ್ನನ್ನು ಓಡಾಡಿಸಿ ನನ್ನ ಪರೀಕ್ಷೆಯನ್ನು ಅವರಿಗೆ ಮಾಡಿಕೊಟ್ಟರು.

'ನೋಡಲಿಕ್ಕೆ ಬಂದಾಗ' ನಡೆದ ಅವರಿಬ್ಬರ ಮಾತನ್ನು ನಾನು ಯಾರ ಮುಂದೆಯೂ ಹೇಳಲಿಲ್ಲ. ನನಗೆ ಆದ ಅವಮಾನವನ್ನು ಮುಂದಿಗೆ ತೋರಿಸಿ, ಇನ್ನಿಷ್ಟು ಅಪಹಾಸ್ಯಕ್ಕೆ ನಾನಾಗಿ ಏಕೆ ಗುರಿಯಾಗಲಿ? ಒಳಗೊಳಗೆ ಮಾತ್ರ ಎಷ್ಟೋಸಾರೆ ಕುದಿಯುತ್ತಿದ್ದೆ. ಹೀಗೆಯೇ ಕಳವಳಿಸುತ್ತಿರುವಾಗಲೇ ಆರು ತಿಂಗಳಾಗಿ ಹೋದವು ಆ

ಮಾತಿಗೆ. ನನ್ನ ಭಾವೀ 'ಅವರ' ಜೊತೆಯಲ್ಲಿಯೇ ನನ್ನ ವಿವಾಹವು ಬಹು ವಿಜೃಂಭಣೆಯಿಂದ ಜರುಗಿತು. ವಿಜೃಂಭಣೆ ಎಂದೇಕೆ ಅನ್ನುವೆನೆಂದರೆ, ದೈವುಳ್ಳವರ ಮನೆಯ ಮದುವೆ-ಮುಂಜಿ ಗಳಲ್ಲಿ ಬರಬಹುದಾದ ಯಾವ ಬಗೆಯ ನ್ಯಾಯ—ನಿಗದಿಗಳೂ ಇಲ್ಲದೆ ಮದುವೆಯಾಯಿತು. ಬಡತನದಿಂದಾದರೂ ಬಹು ಸಮಾಧಾನ ಕರವಾಗಿ ಆಯಿತು. ತೃಪ್ತಿ-ಸುಖ-ಸಮಾಧಾನಗಳಿಗಿಂತ ಮಿಗಿಲಾದ ವಿಜೃಂಭಣೆಯು ಈ ಜಗತ್ತಿನ ಸಂಸಾರದಲ್ಲಿ ಇನ್ನಾವದಿದೆ?

ಮುಂದೆ ಸ್ವಲ್ಪ ಕಾಲಾವಧಿಯಲ್ಲಿಯೇ, ನಾನು, ನನ್ನವರಿಗೆ ಕಾರವಾರಕ್ಕೆ ಚಾಕರಿಯಿದ್ದುದರಿಂದ, ಅಲ್ಲಿಗೆ ತೆರಳಬೇಕಾಯಿತು. ಅವರ ಪ್ರೇಮವು ನನ್ನ ಮೇಲೆ ಅಷ್ಟಿಷ್ಟೆಂದು ಹೇಳಲಾಗದು. ಅವರಿಂದ ನನಗೆ ಸುಖ ಅಷ್ಟಿಷ್ಟಿರಲಿಲ್ಲ; ಆದರೂ ನನ್ನನ್ನು ನೋಡ ಲಿಕ್ಕೆ ಬಂದಾಗ ಅವರು ನನ್ನ ಮೇಲಿಟ್ಟ ಕುಂದು ನೆನೆದು ಕೊರ ಗುತ್ತಲೇ ಇದ್ದೆನು. ಹೀಗಿರುವಾಗ ಒಂದು ದಿನ ನಾವಿಬ್ಬರೇ ನಮ್ಮ ಸ್ವಂತದ 'ಕಾರಿ'ನಲ್ಲಿ ಸಾಯಂಕಾಲಕ್ಕೆ ತಿರುಗಾಡಲಿಕ್ಕೆಂದು ಸಮುದ್ರ ತೀರಕ್ಕೆ ಹೊರಟೆವು. ಆಗಂತೂ ನನಗೆ ಪಂಢರಪುರದೊಳಗಿನ ಆ ಆಗಬಹುದಾಗಿದ್ದ ಸವತಿಯ ನೆನಪಾಯಿತು; ಹಠಾತ್ತಾಗಿ ನೆನಪಾ-ಪಾಯಿತು! ಜನರ ಗಲಾಟೆಯಿಲ್ಲದ ರಮ್ಯ ಸ್ಥಳದಲ್ಲಿ, ಒಂದು ಗಿಡದ ಬುಡದಲ್ಲಿ ಇರುವ ಒಂದು ಸಣ್ಣ ಬಂಡೆಗಲ್ಲ ಮೇಲೆ ಹೋಗಿ ಕುಳಿತೆವು. ಆಗ ಅವರೊಬ್ಬರೇ ಇದ್ದುದನ್ನು ನೋಡಿದಾಗಂತೂ ನನ್ನ ದುಃಖವು ಇನ್ನಿಷ್ಟು ಉಮ್ಮಳಿಸಿ ಹೊರಚಿಮ್ಮಿತು; ಅದರೊಡನೆ ಉದ್ವೇಗವೂ ಹೆಚ್ಚಾಯಿತು. ಹೇಗಾದರೂ ಮಾಡಿ ಆ ಮಾತನ್ನು ಒರೆಗೆ ಹಚ್ಚಿಯೇ ತೀರಬೇಕು, ಅಂತಹ ಕುರುಡಿ-ಕುಂಟಿಯನ್ನು ಹೇಗೆ ಮದುವೆ ಯಾದರೆಂಬ ಮಾತನ್ನೂ ಅವರಿಗೆ ಹಂಗಿಸಿ ಬಿಡಬೇಕೆಂದು ದೃಢ-ನಿಶ್ಚಯ ಮಾಡಿದೆನು; ಆದರೆ ಕೇಳಲು ಧೈರ್ಯ ಸಾಲದು. ಕೈಕಾಲು ನಡುಗಹತ್ತಿದವು; ಮುಖವು ಕಪ್ಪಿಟ್ಟಿತು; ಕಣ್ಣಲ್ಲಿ ನೀರು ತುಂಬಿತು.

ಇದನ್ನೆಲ್ಲ ಸೂಕ್ಷ್ಮವಾಗಿ ನೋಡಿ ನನ್ನವರು ಬಹಳೇ ಕಳಕಳಿಯಿಂದ ಕೇಳಿದರು: 'ಇದೇನು ಮನೋರಮೆ, ಮುಖನ್ನೊಮ್ಮೆಲೇ ಬಾಡಿಸಿದೆ? ಅಳುವಿಯೇಕೆ? ಏನಾಯಿತು? ಇಷ್ಟು ಉಲ್ಲಾಸದಿಂದ ಇಬ್ಬರೇ ತಿರುಗಾಡಲಿಕ್ಕೆ ಬಂದಿರುವಾಗ, ಗಳಿಗೆಯ ಹೊತ್ತನ್ನು ಇಬ್ಬರೂ ಮೋಜಿನಿಂದ ಕಳೆದು ಆನಂದಪಡೋಣ ಬೇಡವೆ? ಹೀಗೇಕೆ ಕಳೆಗುಂದಿದೆ? ಯಾಕೆ?" ಇಷ್ಟೇ ಸಾಕಾಯಿತು ನನಗೆ; ಸಮಯವು ಸಾಧಿಸಲಿಕ್ಕೆ ನೆಟ್ಟಗಿದೆಯೆಂದಪಳೇ, 'ತಾವು ನನ್ನನ್ನು ನೋಡಲಿಕ್ಕೆ ಬಂದಾಗ ನಮ್ಮ ಭಾವನವರೆದುರಿಗೆ ಕುರುಡಿ-ಕುಂಟಿಯೆಂದು ಕುಂದನ್ನೇಕೆ ಇಟ್ಟಿರಿ! ಸುಮ್ಮಸುಮ್ಮನೇ ಅಪವಾದ ಕೊಡಬೇಕೆ? ಅವುಗಳಲ್ಲಿ ಒಂದಾದರೂ ಕುಂದಿದೆಯೆ ನನ್ನ ಬಳಿ?.... ಮತ್ತೆ.... ಅಂಥಾ ಕುರುಡಿ-ಕುಂಟಿಯನ್ನು, ಪಾಪ ಈಗ ಮದುವೆಯಾದಿರಲ್ಲ?....' ನನ್ನ ಮಾತು ಮುಂದೆ ಸಾಗಲಿಲ್ಲ; ಅಳುವು ಉಕ್ಕಿ ಉಕ್ಕಿ ಬಂದಿತು.

'ನಾನಾವಾಗ ಹಾಗೆಲ್ಲ ಅಂದೆ?' ಅವರು ಮರುಕದಿಂದ ಮಾತನಾಡಿದರು. ಮನಬಂದಂತೆ ಮಾತಾಡಿ ಮರಳಿ ಈ ಮರುಕದ ಸೋಗು ನೋಡಿ ನನಗೆ ಸಿಟ್ಟು ಹಿಡಿಸಲಾರದಷ್ಟಾಯಿತು. 'ಭಾವಯ್ಯನವರಿಗೆ ಕೇಳಿಸಿಕೊಡುವೆನು, ನೆನಪಿಲ್ಲದಿದ್ದರೆ! ನನ್ನ ಕೂದಲು ಸಹ ದಪ್ಪ-ಬಿರುಸೆಂದವರೂ ತಾವೇ!! ಅಟ್ಟದ ಮೇಲಿನ ಕೋಣೆಯಲ್ಲಿ ಕುಳಿತಾಗ ಅಂದಿಲ್ಲವೆ? ಪಂಢರಪುರದಲ್ಲ ಸಹ ಒಂದು ನೀಳಗಣ್ಣಿನ ಗಟ್ಟಿಮುಟ್ಟ ಹುಡುಗಿಯನ್ನು ನೋಡಿದ್ದನ್ನು, ನಿಮ್ಮ ತಾಯಿಯವರು ಅದನ್ನು ನೋಡಬೇಕೆಂದದ್ದನ್ನು, ಅವರಿಗಾಗಿ ಒಂದು 'ಕಾರು' ಕೊಳ್ಳಲು ಮನಸ್ಸಿದ್ದದ್ದನ್ನು ನೀವು ಹೇಳಲಿಲ್ಲವೆ? ಈಗಲಾದರೂ ನೆನಪಾಗುವದೆ?'

ಅವರಿಗೇನು ನೆನಪಾಯಿತೋ ಏನೋ, ಒಮ್ಮೆಲೇ ನನ್ನ ಕೈ ಸೆಳೆದೊಗೆದು ಖೊಳ್ಳನೆ ನಕ್ಕರು. 'ಆ ವಿಷಯವೇ! ಅದೆಂದರೆ .... ನಾನೊಂದು ಕುದುರೇಗಾಡಿ ಕೊಳ್ಳಬೇಕೆಂದಿದ್ದೆ.. ಆ ವಿಚಾರ ಬದ-

ಲಾಗಿ ಕಾರು ಕೊಂಡೆ. ಗಾಡಿಗೆ ಹೂಡುವ 'ಕುದುರೆ' ನನ್ನ ಜೊತೆ-ಯಲ್ಲಿಯೇ 'ಕಾರಿ'ನಲ್ಲಿ ಬಂದು ಈಗ ನನ್ನ ಬಳಿ ಕುಳಿತಿರುವದು."

ಅವರು ನಕ್ಕುಬಿಟ್ಟರು. ನನಗೆ ಸಿಟ್ಟಿನಿಂದ ಮೈಯೆಲ್ಲ ಉರಿಯಹತ್ತಿತು. ನೀವೇ ಹೇಳಿರಿ—ನನಗೆ ಸಿಟ್ಟು ಬಂದರೆ ತಪ್ಪೇ! —ಅವರು—ಅವರು ನನ್ನನ್ನು ಹೀಗೆ ನಾಚಿಸಬೇಕೇ!

———

# ಕರುಳ ಕತ್ತರಿ

“ಚಂದ್ರಾ, ಚಂದ್ರಕ್ಕಾ, ಬಾಗಲಾ ತಗೀಯವ್ವಾ ಚಂದ್ರಾ, ಚಂದ್ರಕ್ಕಾ, ಚಂದ್ರವ್ವಾ! ”

ನಾಲ್ಕು ವರುಷಗಳ ತರುವಾಯ ಇವೊತ್ತು ಚಂದ್ರಕ್ಕನು ಈ ಅಕ್ಕರತೆಯ ದನಿಯನ್ನು ಕೇಳಿದ್ದು.

ಮೂರೂ ಸಂಜೆಯಾಗಿತ್ತು. ತಲೆಯ ಮೇಲೆ ಸಣ್ಣದೊಂದು ಹಸಿಬೆ, ಕೈಯ್ಯಲ್ಲೊಂದು ತಂಬಿಗೆ. ಎಲೆಯಡಿಕೆಗಳನ್ನು ಮಿತಿಮೀರಿ ತಿಂದಿದ್ದನು. ಅವನ ಪಾದಗಳ ಮೇಲೆ ಮುಸುಕಿದ್ದ ಕೆಂಬಣ್ಣದ ಹುಡಿಯನ್ನು ನೋಡಿದೊಡನೆ ಇವನು ಕಾಲ್ನಡಿಗೆಯಿಂದಲೇ ಬಹು ದೂರದ ವರೆಗೆ ಪ್ರಯಾಣ ಮಾಡಿರಬೇಕೆನಿಸುವ ಹಾಗಿತ್ತು.

ದೇವರ ಮುಂದೆ ದೀಪಹಚ್ಚಿ ಹಿತ್ತಿಲಲ್ಲಿ ತುಲಸೀವೃಂದಾವನದೆದುರಿಗೆ ಕೈಮುಗಿದು ಕುಳಿತಿದ್ದಳು ಚಂದ್ರಾ. ತಂದೆಯ ಧ್ವನಿಯನ್ನು ಕೇಳಿದೊಡನೆಯೆ ಹಿಂದಿನ ದುಃಖವನ್ನೆಲ್ಲ ಮರೆತು ಕಕ್ಕಾವಿಕ್ಕಿಯಾದವಳಂತೆ ತಂಬಿಗೆ-ಕರಡಿಗೆಗಳನ್ನು ಅಲ್ಲಿಯೇಬಿಟ್ಟು ಓಡಿಬಂದು ಬಾಗಿಲ ತೆರೆದಳು.

“ ಅಪ್ಪಾ ಬಾರಪ್ಪಾ ಒಳಗ, ಇದೇನಪ್ಪಾ ಭಾಳ ದಿವಸಕ್ಕ ಬಡ ಚಂದ್ರೀ ನೆನಪಾತೂ, ಅಂತೂ ನಾ ಜೀವಂತ ಇದ್ದೇನಂತ ನೆನಪಿಟ್ಟೀ ಅನ್ನು ....” ಹೊಯ್ಯೆಂದು ಅಳತೊಡಗಿದಳು.

“ ಅಲ್ಲವ್ವಾ, ಮೂರೂಸಂಜೀ, ದೇವರ ಮುಂದ ದೀಪಾ ಹಚ್ಚೀದಿ, ತುಳಸೀಮುಂದ ಹಚ್ಚೀದಿ, ಮುಂಚೀಬಾಗಲಾ ಯಾಕ ಹಾಕಿಟ್ಟೇದೆವ್ವಾ? ಮೂರೂ ಸಂಜೀ, ಲಕ್ಷ್ಮೀದೇವಿ ಬರೂ ವ್ಯಾಳ್ಯೆ....”

"ಎಲ್ಲಾ ಖರೇನಪ್ಪಾ, ಲಕ್ಷ್ಮೀದೇವಿ ನಮ್ಮಂಥಾ ಪಾಪಿಷ್ಠ ಮುಂಡೇರ ಮನೀ ಒಳಗ ಯಾತಕ್ಕ ಬಂದಾಳೇಳು. ಅಲ್ಲಿ ನಿನ್ನೂ-ರೊಳಗ ಎಲ್ಲಾರೂ ಹುಂಬ ಜನರು, ನಮ್ಮನೀ ಬಾಗಿಲಿಗೆ ಕಲ್ಲು ಹೊಡೆಯೋದು, ಗದ್ದಲಾ ಮಾಡೋದು ಮಾಡತಿದ್ರು, ಅಲ್ಲಿರಲಿಕ್ಕೆ ಬ್ಯಾಸತ್ತು, ಮಾರಾಯರು ಬೆನ್ನಿಗೆ ಹಚಿಗೊಂಡು ಬಂದ್ರಂತ ಅವರ ಊರೊಳಗನs ಅವರ ಕಣ್ಣೆದುರಿಗೆ ಇದ್ದರ ಆತೂ ಅಂತ ಹೇಳಿ ಶಹರದೂರಿಗೆ ಬಂದ್ರು, ಅಲ್ಲೀಕಿಂತಾನೂ ಇಲ್ಲೀ ಶಾಣೇ ಜನರ ಕಾಟ ಭಾಳ ಆಗೇದ. ಸಂಜಿ ಆಗೋಣಾ, ಬಾಗಿಲಿಗೆ ರಾಡೀ ಒಗಿಯೋದು, ಕಲ್ಲು ಹೊಡಿಯೋದು, ಸಿಳ್ಳು ಹಾಕಿ ಹಾಕಿ ಚೀರೋದು ಮಾಡ್ತಾರ, ಮಾಡಿಕೊವಲ್ರ್ಯಾಕ , ಆದರ ಒಳಗ ಅವರ ಪ್ರವೇಶ ಬ್ಯಾಡಾಂತ, ಅವರ್ನ ಆ ಲಕ್ಷ್ಮೀನ್ನ ಕೂಡೆ ಹೊರಗ ಹಾಕಿ ಬಾಗಲಾ ಹಾಕಿ ಬಿಟ್ಟಿರತೇನಿ. ಊಟಾ—ಗೀಟಾ ತೀರಿಸಿಕೊಂಡು ರಾತ್ರೀ ಒಂಭತ್ತಕ್ಕ ಬರತದ ಅವರ ಸವಾರಿ, ಆವಾಗನs ಎದ್ದು ಬಾಗಲಾ ತಗೀತೇನಿ. ಇರ-ವಲ್ದ್ಯಾಕ, ಇಕಾ ನೀರು ತಗೊಂಡು ಕಾಲು ತೊಳಕೋ, ಆಡಿಗ್ಯಾಗೇವ ಊಟಾ ಮಾಡೋಣ.

ಪರಸ್ಪರರ ಕ್ಷೇಮಸಮಾಚಾರವನ್ನು ಕೇಳಿಕೊಳ್ಳುವದಾಯಿತು ಆ ಸುದ್ದಿ ಈ ಸುದ್ದಿಯಾಯಿತು. ಒಳ್ಳೆಯ ಆನಂದದಿಂದ ಇಬ್ಬರೂ ಉಂಡರು ತಿಂದರು. ತಂದೆಗೆ ವೀಳ್ಯವನ್ನು ಮಡಿಚಿಕೊಟ್ಟಳು. ಬೆಳ್ಳಿಯ ಸಣ್ಣ ತಟ್ಟೆಯಲ್ಲಿ ಕೆಲವು ಹಣ್ಣುಗಳನ್ನು ತಂದಿಟ್ಟಳು. ತಂಗಳುರೊಟ್ಟಿಯನ್ನು ಸಹ ಹೊಟ್ಟೆತುಂಬ ಕಾಣದ ಮುದುಕನಿಗೆ ಈ ರಾಜಠೀವಿಯ ಉಪಚಾರದಿಂದ ಹೊಟ್ಟೆ ತುಂಬಿತು, ಮನಸು ತೃಪ್ತಿ ಹೊಂದಿತು.

"ಇಷ್ಟೆಲ್ಲಾ ಆತವ್ವಾ, ಈಗ ನಾಲ್ಕು ವರ್ಷಾತೂ ನೀ ನಮ್ಮನೀ ಬಿಟ್ಟು ಏನೇನ ಗಳಿಸೀದೆವ್ವಾ? ನಿನ್ನ ಮಾಲಕರು ನಿನ್ನ ಸಂಗತೀ ಹ್ಯಾಂಗಿದ್ದಾರ? "

"ಅಯ್ಯ ಅಪ್ಪಾ, ಅದನ್ನೇನ ಕೇಳ್ತೀಯೊ? ಅವರು ಮಾಡಿಕೊಂಡ ಹೇಣತೀ ಮ್ಯಾಲೆ ಜೀವಾ ಮಾಡಿದ್ಹಾಂಗ ನನ್ನ ಮ್ಯಾಲೆ ಸಹ ಜೀವ ಕಳಕೋತಾರ. ಇಷ್ಟ ಯಾಕ, ಅವರ ಹೇಣ್ತಿ ಸುದ್ದಾ ಭಾಳ ದೊಡ್ಡ ಮನಸಿನವರಿದ್ದಾರ; ಮೊನ್ನೆ ತಮ್ಮ ಕೂಸಿನ ಜಾವಳದಾಗ ನನ್ನ ಮುದ್ದಾಂ ಕರೆಕಳಿಸಿ ಸಾಲ್ಕು ದೇವರ ಪದಾ ಅನ್ನಲಿಕ್ಕೆ ಹಚ್ಚಿದ್ರು, ಮತ್ತ ಹತ್ತ ಮಂದೀ ಒಳಗ, ತಮ್ಮ ಗೆಳತೇರ ಮುಂದ ಒಂದ ಜರದ ಸೀರಿ ತಂದು, ಸ್ವತಃ ತನ್ನ ಕೈಲೆ ಉಡೀ ತುಂಬಿದರು, ಇದsರ ಏನು ಸಣ್ಣ ಮಾತಾತ ಅಪ್ಪಾ? ಹಬ್ಬಾ-ಹುಣ್ಣಿವೀ ಬಂತಂದ್ರ ಆ ತಾಯಿ ನನಗ ಒಲೀನ ಹೊತ್ತಿಸಗೊಡೂದುಲ್ಲಾ. ಅವರ ಮಕ್ಕಳೂ ಮರಿ ಎಲ್ಲಾ ನಮ್ಮಲ್ಲೆ ಬರ್ತಾವ, ಹೋಗ್ತಾವ! ಇವರೂ ಭಾಳೊತ್ತು ಇಲ್ಲೇ ಕೂತ್ರ, "ಮನೀಗೆ ಲಗೂನ ಹೋಗ್ರಿ, ಅವ್ವಾ ಅವರು ಹಾದೀ ನೋಡ್ತಿದ್ದಾರಾದೀತೂ" ಅಂತ ಸಿಟ್ಟು ಮಾಡಿ ಕಳಿಸಿಕೊಡತೇನಿ. ಮತ್ತ ಅವ್ವಾ ಅವರೂ ಹಾಂಗs ಹೇಳಿ ಇಲ್ಲಿಗೆ ಕಳಸ್ತಾರ" ಎನ್ನುತ್ತ, ತನ್ನ ಟ್ರಂಕು ಪೆಟ್ಟಿಗೆಗಳನ್ನು ತೆಗೆದು, ಆ ನಾಲ್ಕು ವರುಷದ ಅವಧಿಯಲ್ಲಿ ತನ್ನ ಮಾಲಿಕರು ತನಗಾಗಿ ಕೊಟ್ಟದ್ದನ್ನೆಲ್ಲ ತಂದೆಗೆ ತೋರಿಸಿದಳು. ಅವನೂ ಹಿರಿಹಿರಿ ಹಿಗ್ಗಿದನು. ಸಾವಿರಾರು ರೂಪಾಯಿ ಬೆಲೆಬಾಳುವ ಬೆಳ್ಳಿಯ ಸಾಮಾನು, ಅರಿವೆ-ಅಂಚಡಿಗಳು, ಮೂರು ನಾಲ್ಕು ಸಾವಿರದ ಚಿನ್ನದಾಭರಣಗಳು.... ಅವಳ ತಂದೆಯು ನಿಜವಾಗಿಯೂ ಬೆರಗಾದನು.

"ತಂಗೀ, ನಮ್ಮೂರ ಮಂದಿ ಹೇಳ್ತಿದ್ರು, ನೀ ಈಗ ಭಾಳ ಆರಾಮಾಗಿದ್ದೀಯಂತ. ಅದಕ್ಕs ನಿನ್ನ ಹಡದಾಕಿ ಅಂದ್ಲು, 'ಹಾಂಗಾರ ಮಾತಾಡಿಸಿಗೊಂಡರs ಬರ್ರೀ ಹೋಗಿ' ಅಂತ, ಬಂದೆ. ಅಂs....ಮತ್ತ ಒಂದು ತಿಂಗಳೊಪ್ಪತ್ತು ನಡೀಯಲ್ಲಾ ಊರ ಕಡೆ—ತವರುಮನೀ ಮಾಡಿ ಬಂದೀಯಂತ."

"ನನಗ ಬರಲಿಕ್ಕೆ ಆಗಲಿಕ್ಕಿಲ್ಲಪ್ಪಾ ಸುಮ್ಮನs. ಭಂಗಾರ-ದ್ಹಾಂಗ ಈಗ ದೇವ್ರು ಅಂತ ಹಾದಿಗೆ ಹತ್ತೇನಿ, ಮಾಲಕರಲ್ಲ ಅವರ

ಬಳಗಕ್ಕೆಲ್ಲಾ ಬೇಕಾಗಿದ್ದೇನಿ, ಹ್ಯಾಂಗ ಅವರೆಲ್ಲಾರ್ನೂ ಬಿಟ್ಟು ಬರ್ಲೆಪ್ಪಾ ? ಅವರೆಲ್ಲಾರೂ ಏನಾರ ತಪ್ಪು ತಿಳುವಳಿಕ್ಯಾದ್ರ ಏನ ಮಾಡಲಿ? ........ಹ್ಯಾಂಗ ಮಾಡಿದರ ಈ ಮಾತು ಬಗೀ ಹರಿದೀತು?"

"ಹೌದವ್ವಾ, ಅದೂ ಖರೇನ. ನಾಲ್ಕೊಪ್ಪತ್ತು ಅನ್ನಾ ಹಾಕಿ ಸಾಕಿದಾಂವಾ, ಅವನ ಬಳಗಾ ಇದs ಹೆಚ್ಚಾತಲ್ಲs ನಿನಗ? ಒಂಭತ್ತು ತಿಂಗಳು ಹೊತ್ತು ಕಷ್ಟಪಟ್ಟ ನಿನ್ನ ತಾಯೀದೂ, ಭಿಕ್ಷಾ ಬೇಡ್ಯಾದ್ರೂ ಹೊಟ್ಟೆಗೆ ಹಾಕಿದ ನಿನ್ನ ತಂದೀದೂ ಈಗ ನಿನಗ ಹ್ಯಾಂಗ ನೆನಪಾದೀತವ್ವಾ?....

" ಅಪ್ಪಾ, ಒಮ್ಮೆಲೇ ಸುಮ್ಮಸುಮ್ಮನ ಸಿಟ್ಟಾಗಬ್ಯಾಡಾ, ಬಾಗಲಾಕ್ಷಿನುಗಿಸಿದ್ಹಾಂಗಾತೂ, ಬಂದ್ರು ಕಾಣಸ್ತದ, ನೀ ಮಲಗೇಳು, ಹೋಗು. ನಾಲ್ಕು ದಿವಸಾ ಇರು, ಅವರ್ನ ಕೇಳಿ ಪರವಾನಗೀ ತಗೊಂಡು ಬರ್ತೇನಂತ........ವಿಚಾರಾನರ ಮಾಡಬ್ಯಾಡಾ ? ಅಪ್ಪಾ ಅವರ ಕಿವಿಗೆ ಸುದ್ಧಾ ಈ ಮಾತು ಒಗಿಯದ ಹೊರಟಿದ್ದು ಬರೋದು ನನ್ನ ಮನಸಿನೊಳಗಿಲ್ಲಾ........" ಎಂದು ಸ್ಪಷ್ಟವಾಗಿ ಉತ್ತರ ಕೊಟ್ಟಳು.

ಮುದುಕನು ಒಳಗೆ ಹೋಗಿ ಮಲಗಿಕೊಂಡನು. ಮುಂದೆ ತಾಸೆರಡು ತಾಸುಗಳ ವರೆಗೆ ಚಂದ್ರವ್ವನ ಗಾಯನ-ವಾದನ ನಡೆ-ದಿದ್ದವು.

* * * *

ನಮ್ಮೂರ ಜಯಶ್ರೀ ಟಾಕೀಜದೆದುರಿಗೆ " ಭಾರೀ ಶೇಂಗ್ದಾಣಿ " ಗಳನ್ನು ಮಾರುತ್ತಿದ್ದ ಬಣಗಾರ ಗದಿಗೆಪ್ಪನು ಆಬಾಲವೃದ್ಧ ಸ್ತ್ರೀ ಪುರುಷರಿಗೆಲ್ಲರಿಗೂ ಒಳ್ಳೆಯ ಪರಿಚಿತನು! ಮೊದಮೊದಲು ಮೂರು-ನಾಲ್ಕು ಮಕ್ಕಳ ತಂದೆಯಾಗುವವರೆಗೂ ಅವನು ದುಡಿಯುತ್ತಿರಲಿಲ್ಲ; ದುಡಿದರೂ, ಮನೆಗೆ ತರುತ್ತಿದ್ದಿಲ್ಲ. ಅತ್ತಿಂದತ್ತಲೇ ಕರೇ ನೀರಿಗೆ ಹಾಳುಮಾಡಿ ಜೋಲೀ ಹೊಡೆಯುತ್ತ ಸಾಯಂಕಾಲ ಮನೆಗೆ ಬರುತ್ತಿದ್ದನು.

ಸಣ್ಣಪ್ಪನೂ ಇಂಥವನ ಹೆಂಡತಿ; ಅವಳೂ ಇವನಷ್ಟೇ ಬುದ್ಧಿವಂತಳು. ಕೇಳುವದೇನು ? ನೆರೆಮನೆಯ ತುಂಗಾಸಾನಿಯ ಐಶ್ವರ್ಯವನ್ನು ನೋಡಿ, ತನ್ನ ಹಿರಿಯ ಮೂವರು ಹೆಣ್ಣು ಹುಡುಗಿಯರನ್ನೂ ಅವಳಲ್ಲಿ ಹಗಲು ರಾತ್ರಿ ದುಡಿಯಲು ಕಳಿಸಿ, ಅವಳಿಂದ ಅವರಿಗೆ ಸ್ವಲ್ಪ ಗಾಯನವಾದನವನ್ನು ಕಲಿಸಿದಳು. ಬಳಿಕ ತುಂಗಾಸಾನಿಯ ಕಡೆಯಿಂದಲೇ ಮೂವರಿಗೂ ವೇಶ್ಯಾಧರ್ಮದ ದೀಕ್ಷೆ ಕೊಡಿಸಿ, ತನ್ನ ಮನೆಯಲ್ಲಿ ಗಳಿಕೆಯ ಮಾರ್ಗವನ್ನು ಹುಡುಕಿ ತೆಗೆದಳು. ಹಿರಿಯ ಮಗಳು ಸೀತೆಯು; ಅವಳಾಗಲೇ ಮನೆಬಿಟ್ಟು ಓಡಿದಳು. ನಡುವಿನವಳಾದ ಗಂಗೆಯು ಕೆಲದಿನಗಳ ಮೇಲೆ ಸಣ್ಣಪ್ಪನ ಕಾಟಕ್ಕೆ ಬೇಸತ್ತು ಬಾವಿಯಲ್ಲಿ ಬಿದ್ದಳು. ತೀರ ಚಿಕ್ಕವಳಾದ ಚಂದ್ರಪ್ಪನು ಒಂದು ವರುಷದ ವರೆಗೂ ತಾಯಿ-ತಂದೆಗಳನ್ನು ಸಲುಹಿಕೊಂಡು ಇರುತ್ತಾ ಬಂದಿದ್ದಳು. ಅವಳಿಗೂ ಸಹ, ಸ್ವಲ್ಪ ದಿನಗಳಲ್ಲಿಯೇ ತಾಯಿಯ ಉಪದ್ರವವು ಬೇಜಾರ ಹುಟ್ಟಿಸಿತು. ಅದೇ ಮನೆಯ ನೆರೆಮನೆಗೆ ತಾನು ತನ್ನದೊಂದು ಬೇರೆ ವಾಸವನ್ನು ಹೂಡಿದಳು.

ಲಕ್ಷ್ಮೀರಮಣನ ಗುಡಿಯಲ್ಲಿ ದಿನಾಲು ಸಾಯಂಕಾಲಕ್ಕೆ ಆರತಿಯ ಸಮಯದಲ್ಲಿ 'ಆ'ಯೆಂದು ಬಾಯ್ತೆರೆದು ಚಂದ್ರೆಯು ಆಲಾಪನೆ ಮಾಡುವಳು. 'ಅಹಾ ಎಂಥದು ಈ ವೈಕುಂಠ' 'ಗರುಡನೇರಿದ ದೊರೆಯೆ' ಎಂದು ಮುಂತಾಗಿ ಹಾಡಹತ್ತಿದಳೆಂದರೆ, ಸ್ವರ್ಗದ ದೇವರು ಭೂಮಿಗಿಳಿದು ವೈದಾಳಿ ನಿಲ್ಲಬೇಕು !!

ಒಮ್ಮೆ ಕೀರ್ತನೆ ನಡೆದಾಗ ನೆರೆಯೂರಿನ ವೆಂಕಣ್ಣ ನಾಯಕರು ಆಕಸ್ಮಾತ್ತಾಗಿ ಗುಡಿಗೆ ಬಂದಿದ್ದರು. ದೇವರು ಅವರಿಗೆ ಅಪಾರ ಸಂಪತ್ತಿಯನ್ನೂ ದೊಡ್ಡಮನಸ್ಸನ್ನೂ ದಯಪಾಲಿಸಿದ್ದನು. ಚಂದ್ರಪ್ಪನು ಆಗ ಹೇಳಿದ ಭಕ್ತಿಗೀತಗಳನ್ನು ಕೇಳಿ ಮೋಹಿತರಾಗಿ ಅವಳ ಪರಿಚಯಮಾಡಿಕೊಂಡರು.

ಇತ್ತ ಸೆರೆಬಡಕ ಗದಿಗೆಪ್ಪನ ಮತ್ತು ಊರೊಳಗಿನ ಹಲಕೆಲವು ಪುಂಡ ಜನರ ಹಾವಳಿಯು ಹೆಚ್ಚುಹೆಚ್ಚಾಗಲು ಚಂದ್ರಾ ಬೇಸತ್ತು, ತಾಯಿಯು ಬೇಡವೆಂದು ಬೇಕಾದಷ್ಟು ಹೇಳಿದರೂ ಕೇಳದೆ, ಜಗಳ-ವಾದರೂ ಹೆದರದೆ, ಊರನ್ನು ಬಿಟ್ಟು ಬಂದು ಈಗ ನಾಲ್ಕು ವರುಷ-ಗಳಾಗಿದ್ದವು. ಅವರ ಸಹವಾಸದಲ್ಲಿ ಅವಳು ಅತ್ಯಂತ ಸುಖಿ-ಯಾಗಿದ್ದಳು.

ಆದರೆ ದೈವಕ್ಕೆ ಇವಳ ಸುಖವು ಸಹನವಾಗಲಿಲ್ಲ. ಗದಿಗೆಪ್ಪನ ತಲೆಯಲ್ಲಿ ಯಾರಾರೋ ಏನೇನನ್ನೋ ತುಂಬಿದರು. ಅಲ್ಲದೆ ಅವನು ದುಡಿದ ಹಣದಲ್ಲಿ ಸ್ವಲ್ಪವನ್ನು ಈಗ ಮನೆಗೆ ತಂದು ಬಾಳುವೆಗೆ ಕಳಿ-ಯೇರಿಸಿದ್ದನು. ಚಂದ್ರವ್ವನಲ್ಲಿದ್ದುದನ್ನಷ್ಟು ಅಪಹರಿಸಿಕೊಂಡು ತಂದು ತನ್ನ ಪ್ರಪಂಚಕ್ಕೆ ಈಡು ಮಾಡಬೇಕೆಂದು ಅವನ ದುರಾಸೆ. ಎಂತಲೇ ಸವಿ ಸವಿ ಮಾತನಾಡಿ ಅವಳನ್ನು ತನ್ನೂರಿಗೆ ತರಲು ಬಯಸಿ ಅವಳಲ್ಲಿಗೆ ಬಂದದ್ದು.

ನಾಯಕರ ಒಪ್ಪಿಗೆಯನ್ನು ಬಲು ಪ್ರಯಾಸದಿಂದ ಪಡೆದು, ಚಂಪ್ರವ್ವನು ತಂದೆಯೊಡನೆ ತನ್ನ ತವರುಮನೆಗೆ ಬಂದಳು. ಬಂದ ದಿನವೇ ರಾತ್ರಿಯಲ್ಲಿ ಅವಳ ತಾಯಿ ಅವಳಿಗಾಗಿ ನೀರು ಕಾಸಿ, ಎಣ್ಣೆ ಹೂಸಿ ಎರೆದಳು........... ಅಹಾ ! ಬಲು ದಿನಗಳ ತರುವಾಯ ಹಡೆದವ್ವನು ಹಚ್ಚಿ ಹೂಸಿದ ಎಣ್ಣೆಯು ಅವಳ ನೆತ್ತಿಗೆ ಅದೆಷ್ಟು ತಂಪನ್ನುಂಟು ಮಾಡಿತು !! ಒಬ್ಬಳಿಗಾಗಿಯೇ ಪಾಯಸದೂಟವು ಸಿದ್ಧವಾಗಿತ್ತು. ಚಂದ್ರವ್ವನು ಬೇಕಾದಷ್ಟು ಬಲವಂತಪಡಿಸಿದರೂ, ಚಿಕ್ಕಮಕ್ಕಳನ್ನು ಕೂಡ ಅವಳೊಡನೆ ಊಟಕ್ಕೆ ಕೂಡಿಸಲಿಲ್ಲ.

" ಅವೆಲ್ಲಾ ಮಕ್ಕಳು ಇದ್ದ-ಬಿದ್ದ ತಂಗಳಾ-ಬಂಗಳಾ ತಿನ್ನಲಿ, ಚಂದ್ರಾ, ನೀ ಸುಖಬಟ್ಟು ಬಂದಾಕಿ, ಹೊಟ್ಟೆತುಂಬ ಉಣ್ಣವ್ವಾ...." ಎಂದಳು ಸಣ್ಣವ್ವ.

" ಅವ್ವಾ, ಹೀಂಗೇನ ಮಾಡ್ತೀಯ ? ಇದ್ದದ್ದರೊಳಗ ಹಂಚಿಗೊಂಡ ತಿಂತೇವಿ. ಹಿಂಗೆಲ್ಲಾ ಮಾಡಬ್ಯಾಡಾ........ " ಎಂದು ಪರಿಪರಿಯಿಂದ ಹೇಳಿದಳು.

ಮರುದಿನ ಮುಂಜಾನೆಯ ಹತ್ತು ಬಡಿದರೂ ಚಂದ್ರವ್ವ ಏಳಲಿಲ್ಲ........ ಮನೆಯವರು ಗಾಬರಿಯಾದರು. ಎಬ್ಬಿಸಿದರು. ' ಆ........ ನಾ........ ಎಲ್ಲಿದ್ದೇನಿ ? ನನ್ನ ತಲೀ ಇವೊತ್ತು ಹಿಂಗ್ಯಾಕ ಆಗಲಿಕ್ಹತ್ತೇದ ? " ಎನ್ನುತ್ತ ಹಿತ್ತಿಲಿಗೆ ಬಂದಳು.

" ಅವ್ವಾ, ಧೋತ್ರದ ಕಾಯಿ ಜಜ್ಜಿ ಜಜ್ಜಿ ಎಷ್ಟು ಚಲ್ಲೀಯ ?.... ಇವ್ಯಾತಕ್ಕ ಬೇಕಾಗಿದ್ವ ನಿನಗ ?........ ಹಾ........ ನನ್ನ ತಲೀನ.... ಹಿಂಗ್ಯಾಕ ಹುಚ್ಚುಚ್ಚುರ ಆಗ್ಲಿಕ್ಹತ್ತೇದ ನನ್ನ ತಲೀ ಒಳಗ ?........ ಅಪ್ಪಾ, ಇವೊತ್ತs ಹೋಗಿ ನನ್ನ ರಾಯರ್ನ ಕರಕೊಂಡು ಬಾರೋ...." ದೊಪ್ಪನೆ ನೆಲಕ್ಕೆ ಬಿದ್ದಳು.

ಗದಿಗೆಪ್ಪನು ನಾಯಕರೂರಿಗೆ ಬಂದನು. ಅವರಿಗೆ ಮುಜುರೆ ಮಾಡಿ "ರಾಯ್ರು, ಲಗೂನ ಊರಿಗೆ ನಡೀರಿ, ನನ್ನ ಮಗಳು ಚಂದ್ರಾ ನಿಮ್ಮ ನೆನಪು ಮಾಡಿ ಮಾಡಿ ಹ್ಯಾಂಗ್ಯಾಂಗರ ಮಾಡಲಿಕ್ಹತ್ತ್ಯಾಳ. ಲಗೂ ಬರ್ರಿ ರಾಯರ, ನಿಮ್ಮ ಕಾಲಿಗೆ ಬೀಳತೇನೀ, ಅಲ್ದ ಬರುವಾಗ ಅಕೀ ಗಂಟುಗದಡೀ ಎಲ್ಲಾ ತರಬೇಕಂತ. "

ರಾಯರಿಗೆ ಗದಿಗೆಪ್ಪನ ಮಾತು ಕೇಳಿ ಸ್ವಲ್ಪ ಸೋಜಿಗವಾಗಿ, ದಿಗಿಲು ಬಿದ್ದಿತು; ಚಂದ್ರಾ ತನ್ನನ್ನು ಅಗಲಿ ಹೊರಟಳೇನೋ ಎಂಬ ಇಲ್ಲದಸಲ್ಲದ ಸಾವಿರ ವಿಚಾರಗಳು ಬರಹತ್ತಿ ಮನಸಿಗೆ ಖೇದವೂ ಆಯಿತು. ಮರುಮಾತನಾಡದೆ ಅವಳ ಎಲ್ಲ ಪ್ರಪಂಚವನ್ನು ಕಟ್ಟಿಕೊಂಡು ಗದಿಗೆಪ್ಪನ ಬೆನ್ನುಹತ್ತಿ ಹೊರಟುಬಂದರು.

ಚಂದ್ರವ್ವ ಮೈಮೇಲಿನ ಚೂರು ಚಾರುಗಳನ್ನೆಲ್ಲ ತೆಗೆದೊಗೆ-ದಿದ್ದಳು. ಕೂದಲುಗಳನ್ನು ಕೆದರಿಕೊಂಡಿದ್ದಳು. ಬಟ್ಟೆಬರೆಗಳ-

ನ್ನೆಲ್ಲ ಹರಿದುಕೊಳ್ಳುತ್ತ, ಹಿತ್ತಿಲಲ್ಲಿ ಜಜ್ಜಿ ಒಗೆದ ಆ ಧತ್ತೂರಿಯ ಕಾಯಿಗಳನ್ನು ನೋಡಿ ಅಳುತ್ತ, ತಾಯಿತಂದೆಗಳನ್ನು ಬಾಯಿಗೆ ಬಂದಂತೆ ಶಪಿಸುತ್ತ ಕುಳಿತಿದ್ದಳು.

ಒಂದೇ ದಿನದಲ್ಲಾದ ಅವಳೀ ದುರವಸ್ಥೆಯನ್ನು ಕಂಡು ನಾಯಕರಿಗೆ ಸಿಡಿಲು ಬಡಿದಂತಾಯಿತು. ಕುತ್ತಿಗೆಶಿರಗಳು ಬಿಗಿದು ಬಂದವು. ಮೆಲ್ಲಗೆ ಅವಳ ಬಳಿಗೆ ಬಂದು, " ಚಂದ್ರಾ! " ಎಂದರು. ಕೂಡಲೆ ನಾಗಿಣಿಯಂತೆ ಬುಸುಗುಡುತ್ತ ಚಂದ್ರಕ್ಕನು "ಅಯ್ಯಯ್ಯೋ ರಾಯಾರ, ಈ ದುಷ್ಟರ ಮನೀಗೆ ನನ್ನನ್ನ ಯಾಕರ ಕಳಿಸಿದಿರೀ........ ನನಗ ರಾತ್ರೀನ ಈ ಭಾಗಾದಿ ಎರದ್ಲೋ, ಒಬ್ಬಾಕೀಗೇ ಊಟಕ್ಕ ಹಾಕಿದ್ಲೋ........ ನನಗೇನೋ ಮಾಟಾ ಮಾಡ್ಯಾರ್ರೀ........ ನನ್ನ ಹೊಟ್ಟೀಯೊಳಗ ಬೆಂಕೀ ಹಾಕಿದ್ಹ್ಯಾಂಗಾಗೇದ, ನನ್ನ ತಲೀಯೆಲ್ಲಾ ತಿರಿಗಿ ತಿರಿಗಿ ದಿಕ್ಕು ತಪ್ಪಿಸೇದ.... ನಾಯಕರ, ನನ್ನ ರಾಯ್ರು........ ಅವ್ವಾನ್ನ ಯಾಕ ತರ್ಲಿಲ್ಲಾ........ ರಾಯ್ರು........ ರಾಯ್ರು........ ನನ್ನ ಗತೀ........"

ರಾಯರು ಕಷ್ಟಬಟ್ಟು ಅಳುತ್ತಲೇ ಕೇಳಿದರು, " ನಿನ್ನ ವಸ್ತ್ರಾ ಒಡಿವೀ, ಬೆಳ್ಳಿ ಭಾಂಡೇ-ಎಲ್ಲಾ ಸಾಮಾನಾ ತರ್ಲಿಕ್ಕೆ ಹೇಳಿದ್ಯಾ? ನಿಮ್ಮಪ್ಪಾ ತಂದಾನ ! "

ನಾಯೇನ "ಹೇಳಿಲ್ಲಾ, ಗಂಟಿನ ದಶಿಂದನs ಹೀಂಗ ಆತೂ.... ( ಭ್ರಮೆಯಾಯಿತೋ ಏನೊ)....ಆ ಯಾರಲ್ಲೆ?....ಅಲ್ಲೇನದು ? .... ನನ್ನ ದುಡ್ಡೆಲ್ಲಾ ಒಮ್ಮೆಲೇ ತಗೊಂಡು ಆಕಾಶಕ್ಕನ ಹಾರಿ ಬಿಟ್ರಲ್ಲಾ .... ನನ್ನ ದಾಗೀನೇ, ಕೋಯಿಮುತ್ತೂರ ಪತ್ಲಾ, ಎಲ್ಲಾ ಒತ್ತೀ ಇಡಲಿಕ್ಕೆ ಒಯ್ದರು...."

ಅವಳಿಗೆ ಬುದ್ಧಿಭ್ರಮೆಯಾದದ್ದನ್ನು ನಾಯಕರು ಚೆನ್ನಾಗಿ ಅರಿತರು. ಪಂಚರ ಸಾಕ್ಷಿಯನ್ನಿಟ್ಟು ಅವಳ ತಾಯಿತಂದೆಗಳ ಮೇಲೆ ವ್ಯಾಜ್ಯ ಹೂಡಿದರು.

ಹಡೆದ ತಾಯಿತಂದೆಗಳು ತಮ್ಮ ಕಂದವ್ವನಿಗೆ ಹುಚ್ಚು ಹಿಡಿಸುವ ಮಾತನ್ನು ಕಾನೂನು ಎಂದಿಗಾದರೂ ಒಪ್ಪೀತೇ? "ಏನೂ ಸಂಬಂಧ ವಿಲ್ಲದ ನಾಯಕನು ಅವಳ ದುಡ್ಡನ್ನು ಅಪಹರಿಸಲಿಕ್ಕೆಂದು ಅವಳನ್ನು ನಮ್ಮಲ್ಲಿಗೆ ಕರೆದುಕೊಂಡು ತಂದು, ಏನನ್ನೋ ಮದ್ದು ಮಾಡಿ, ನಮ್ಮ ಮೇಲೆ ಅಪಕೀರ್ತಿ ತಂದು, ತಾನು ಪಾರಾಗಬೇಕೆಂದು ಮಾಡಿದ್ದಾನೆ" ಎಂಬ ಅವಳ ತಾಯಿತಂದೆಗಳ ಪುರಾವೆಗೆನೇ ಪುಟ ಸಿಕ್ಕು, ರಾಯರ ಮೇಲೆಯೆ ಖಟ್ಲೆಯು ತಿರುಗುಪ್ಪಾಗಿ, ಐನೂರು ರೂಪಾಯಿ ದಂಡ, ಆರು ತಿಂಗಳ ಸಶ್ರಮಶಿಕ್ಷೆಯಾಯಿತು.

"ಆತೂ, ಇದೊಂದು ನನ್ನ ಚಂದ್ರಾನ ಕಟ್ಟಕಡೀ ರಿಣಾ !!" ಎಂದು ದಂಡವನ್ನು ಬಡಿದು, ನಾಯಕರು ಅವಳ ಮುಖ ನೋಡಿ ಅತ್ತು ಕರೆದು, ಜೇಲಿನ ದಾರೀ ಹಿಡಿದರು.

ಮುಂದೆರಡು ದಿವಸಗಳ ತರುವಾಯ ಅವ್ವನವರು ಬಂದು ಚಂದ್ರಿಯ ಮರುಗನ್ನು ನೋಡಿ ಕಣ್ಣೀರಿಟ್ಟು ಹೋದರು. ಹೋಗು-ವಾಗ ಏನೋ ಒಂದು ಮಾತು ಕೇಳಬೇಕೆಂಬಾಸೆಯಿಂದ "ಬಾ ಚಂದ್ರಾ, ನಮ್ಮೂರಿಗೆ. ನಾ ನಿನಗ ಮತ್ತ ಬೇಕಾದಷ್ಟು ಗಂಟು ಕೊಡತೇನಿ" ಎಂದರು.

ಆಗವಳು "ಬ್ಯಾಡ್ರೆವ್ವಾ, ನನ್ನ ಗಂಟು ನನ್ನ ಹತ್ತೀಲೆನs ಐದ.... ಇಕಾ ನೋಡ್ರಿ" ಎನ್ನುತ್ತ ಒಂದು ಬುಟ್ಟಿಯ ತುಂಬ ಆಗುವಷ್ಟು ರೂಪಾಯಿಯಷ್ಟು ಆಕಾರದ ಕಟೆದು ಇಟ್ಟುಕೊಂಡ ತನ್ನ ಹಂಚಿನ ಹಲಪೆಯ ಗಂಟನ್ನು ತೋರಿಸಿದಳು.

ಮರುದಿವಸ ಚಂದ್ರವ್ವನನ್ನು "ಹುಚ್ಚು ಹಿಡಿದವಳೆಂ"ದು ಅವಳ ತಾಯಿತಂದೆಗಳು ಮನೆಬಿಟ್ಟು ಹೊರಕ್ಕೆ ಹಾಕಿದರು. ಊರೊಳಗೆ ಜನವು ಮನಬಂದಂತೆ ಆಡಿಕೊಳ್ಳಹತ್ತಿದರು. ಯಾರೆಂದರು, ತಾಯಿತಂದೆಗಳೇ ಅವಳನ್ನು ಈ ಪಾಡು ಮಾಡಿದ-ರೆಂದು! ಯಾರೆಂದರು, ಹಡೆದ ತಾಯಿತಂದೆಗಳಿಂದ ಇಂತಹ

ಸಾಹಸವಾಗಲಾರದು, ಅವನೇ ಆ ಪುಗಸೆಟ್ಟೆಯ ದುಷ್ಟ ನಾಯಕನು ಮಾಡಿರಬೇಕೆಂದು !!

ಅಂತೂ ಚಂದ್ರವ್ವನ ಮಟ್ಟಿಗೆ ಅವಳ ಗತಿಯೊಗ ಬೀದಿಯ ಭಿಕಾರಿಗಿಂತಲೂ, ಓಣಿಯ ಆಚೆಗಿನ ನಾಯಿಗಿಂತಲೂ ಕಡೆಯಾಗಿದೆ. ಊರೊಳಗಿನ ಹಲವು ಕರುಣಾಳುಗಳು ಅವಳನ್ನು ಆಗಲೇ ಹುಚ್ಚರ ಆಸ್ಪತ್ರೆಗೆ ಸಾಗಿಸಿದ್ದರು. ಏನೂ ಆಗಲಿಲ್ಲ........ ' ಧತ್ತೂರಿ ಬೀಜ ' ದ ಮುಂದೆ, ಆಸ್ಪತ್ರೆಯ ಔಷಧಗಳೆಲ್ಲವೂ ತಲೆ ತಗ್ಗಿಸಿದವು. ಆಸ್ಪತ್ರೆಯವರೂ ನಿರುಪಾಯರಾಗಿ—ನಿರಾಶರಾಗಿ ಅವಳನ್ನು ಬಿಟ್ಟು ಬಿಟ್ಟರು.

ಅವಳ ಮಾರ್ಗವೇ ಈಗ ಬೇರೆ. ಎರಡು ಕತ್ತೆಗಳು ಹೊರಲಾರದಷ್ಟು ಭಾರವು ಅವಳ ತಲೆಯ ಮೇಲಿರುವದನ್ನು ನಾವು ಯಾವಾಗಲೂ ಕಾಣಬಹುದು. ಹಾಳುಮನೆಗಳ ಗೋಡೆಗಳಿಗೊರಗಿಕೊಂಡು ರಾತ್ರಿ ಕಾಲ ಕಳೆಯುವಳು. ಹಗಲು ಹೊತ್ತು ಯಾರಾದರೂ ಅಕ್ಕ ತಂಗಿಯರು ಎಂಜಲು-ಮುಸುರೆಗಳನ್ನು ಹಾಕಿದರೆ ತಿನ್ನುವಳು. ಇಲ್ಲವಾದರೆ ತನ್ನ ಗಂಟಿನೊಳಗಿನ ಹಲಪಿಯ ಹಣವನ್ನು ಎಣಿಸುತ್ತಲಾಗಲಿ, ಜನರು ಕೊಟ್ಟ ಹರಕು-ಮುರಕು ಕೌದಿಯ ಇಲ್ಲವೆ ತಟ್ಟಿನ ತುಂಡುಗಳನ್ನು ಜರದ ಅರಿವೆಗಳೆಂದು ಮಡಿಕೆ ಹಾಕುತ್ತಲಾಗಲಿ, ಇಲ್ಲವೆ ಲಕ್ಷ್ಮೀರಮಣನ ಗುಡಿಯ ಮುಂದೆ ಸರಾಗವಾಗಿ ಹಾಡುತ್ತಲಾಗಲಿ ಕುಳಿತುಕೊಳ್ಳುವಳು. ತಿಪ್ಪೆಯಲ್ಲಿ ಕಸದ ಗುಂಡಿಗಳಲ್ಲಿ ಜನರು ಎಷ್ಟು ಒಡಕು ಗಡಿಗೆ-ಮಡಿಕೆಗಳನ್ನು ಚೆಲ್ಲುವರೋ, ಅಷ್ಟೆಲ್ಲವೂ ನಮ್ಮ ಚಂದ್ರವ್ವನ ಖಜಾನೆಯನ್ನು ಸೇರುವವು. ಅವಳೀಗ ಚಂದ್ರವ್ವನಲ್ಲ, " ಹುಚ್ಚ—ಚಂದ್ರಿ !!! "

# ಬಕಪಕ್ಷಿ

ನಾವಿರುವದು ಸಣ್ಣದೊಂದು ಹಳ್ಳಿ; ಅದರ ಹೆಸರು ಊರೂರು. ಅದಕ್ಕೆ ಊರೂರೆಂದು ಹೆಸರು ಬರಲಿಕ್ಕೆ ಒಂದು ಕಾರಣವೇ ಆಯಿತಂತೆ— ನಮ್ಮ ಪೂರ್ವಜರು ಹೇಳುತ್ತಿದ್ದರು; ಇಡಿಯ ಊರೂರಿನ ಜನವೇ ಹೇಳುತ್ತಿತ್ತು. ಯಾವನೋ ಒಬ್ಬ ಸಾಧುವು ಆ ಊರಿನಿಂದೀ ಊರಿಗೆ, ಈ ಊರಿನಿಂದಾ ಊರಿಗೆ, ಅಡ್ಡಾಡುತ್ತ ಅಡ್ಡಾಡುತ್ತ ಬಂದು ಒಂದು ಬೈಲಿನಲ್ಲಿ ಇಳಿದನಂತೆ; ಅವನು ಜನರಿಗೆ ಅವರವರ ಇಚ್ಛೆಯ ಮೇರೆಗೆ ಕೆಲಸಗಳನ್ನು ಕೈಗೂಡಿಸಿಕೊಡುವ ಸಾಧುವಾಗಿದ್ದನಂತೆ; ಅದಕ್ಕಾಗಿಯೇ ಅವನ ಮಬ್ಬಿಗೆ ಬಿದ್ದ ಎಷ್ಟೋ ಜನರು ಅವನ ಬೆನ್ನುಹತ್ತಿ ಬಂದು ಆ ಬೈಲಿನಲ್ಲಿಯೇ ತಳವೂರಿದರಂತೆ" ಮುಂದೆ ಏನಿಲ್ಲೆಂದರೂ ನಾಲ್ಕಾರು ವರುಷಗಳ ವರೆಗೆ ಆ ಬಾವಾಜಿಯು ಅಲ್ಲಿಯೇ ಇದ್ದು ಜನರ ಮನದಣಿಕೆಗಳನ್ನು ಈಡೇರಿಸಿದನಂತೆ. ಒಂದು ಊರಿನಲ್ಲಿಯೂ ಒಂದು ದಿನ ಸಹ ಒತ್ತಟ್ಟಿಗೆ ಕಾಲೂರಿ ನಿಲ್ಲದ ಆ ಸ್ವಾಮಿಯು ನಾಲ್ಕಾರು ವರುಷಗಳ ವರೆಗೆ ಒಂದೇ ಠಾವಿನಲ್ಲಿ ನೆಲೆಸಿದುದು ಪುಣ್ಯಭೂಮಿಯಾದ ಆ ಬಯಲಿನ ಮಹಿಮೆಯೆಂದು ಜನರು ಸೋಜಿಗಗೊಂಡು ಅನ್ನಹತ್ತಿದರು. ಒಂದು ದಿನ ತನ್ನಲ್ಲಿಗೆ ಒಂದು ಕೆಲಸಕ್ಕಾಗಿ ಬಂದ ಒಬ್ಬ ಹುಡುಗನಿಗೆ, 'ಮುಂದೆ ನೀನು ಬಲು ದೊಡ್ಡ ಮನುಷ್ಯನಾಗಿ ನಮ್ಮ ಊರೂರಿನಲ್ಲಿಯೇ ಬರುವಿ' ಎಂದನಂತೆ. ಮುದುಕನ ಬಾಯಿಯಿಂದ ಬಂದ ಮಹಾಪ್ರಸಾದವೆಂದು ಮುಗ್ಧ ಭಕ್ತರೆಲ್ಲರೂ ಅಂದಿನಿಂದ ಆ ಬಯಲಿಗೆ ಊರೂರೆಂತಲೇ ಕರೆಯಹತ್ತಿದರಂತೆ.

ಮುಂದೆ ಕೆಲದಿನಗಳಲ್ಲಿಯೇ ಏನಿಲ್ಲೆಂದರೂ ನೂರಿನ್ನೂರು ಮನೆಗಳು ಅಲ್ಲಿ ಆದವು. ಗೌಡರು, ಕುಲಕರ್ಣಿಯರು, ರೈತರು, ಎಲ್ಲರೂ ಬಂದರು. ಅಗಸನದೊಂದೇ ಮನೆ; ಹಜಾಮನದೊಂದೇ

ಕಟ್ಟೆ; ಕಟ್ಟೆಗೆಯದೊಂದೇ ಅಡ್ಡೆ; ಹೊಲೆಯರ ತಿಮ್ಮನದೊಂದೇ ಮನೆ. ಊರ ನಡುವೆ ಮೂರು ಕಿರಾಣೀ ಅಂಗಡಿಗಳ ಮಳಗಿಯ ಸಾಲೊಂ-ದಿದ್ದಿತು. ಇತ್ತೀಚೆಯ ಹತ್ತು ವರುಷಗಳಲ್ಲಿ, ಪೇಟೆಯ ಮಧ್ಯದಲ್ಲಿ, ಉಡುಪಿಯ ಸಿ. ಮೇಘಶ್ಯಾಮಾಚಾರ್ಯರ ಚಹಾ-ಫಲಾಹಾರದ ಅಂಗಡಿಯೊಂದು, ಗುರುಪಾಲ ಸಾಹುಕಾರರ ಕಿಡಕು-ಮುಡಕು ಬೆಳ್ಳಿ-ಬಂಗಾರದ ಸಾಮಾನುಗಳ ಸರಾಫೀ ಅಂಗಡಿಯೊಂದು, ಹಜರತಖಾನನ ಸಿನ್ನರ ಬೀಡಿಯ ಅಂಗಡಿಯೊಂದು, ಇವಿಷ್ಟಾಗಿ ಬಿಟ್ಟವೆ; ಸಾಯಂಕಾಲದ ಹೊತ್ತಿನಲ್ಲಿ ಸಿ. ಮೇಘಶ್ಯಾಮಾಚಾರ್ಯರು ತಮ್ಮ ಹೋಟೆಲಿನಲ್ಲಿ ಇತ್ತೀಚೆ ತಂದಿದ್ದ ತಮ್ಮ ಕಿಟ್ಸನ್ ಲಾಯಿಟು ಹೊತ್ತಿಸತೊಡಗಿದರೆಂದರೆ ಊರಿಗೆ ಊರೇ ಸೋಜಿಗಬಟ್ಟು ನೋಡುತ್ತ ನಿಲ್ಲುವದಂತೆ. ಹೆಣ್ಣುಮಕ್ಕಳು ಸಹ ನೀರಿನ ನೆವಮಾಡಿ ಬಗಲೊಳಗೆ ಒಂದೊಂದು ಕೊಡವಿಟ್ಟುಕೊಂಡು ಸರಿಯಾಗಿ ಆ ವೇಳೆಗೆ ಆ ದಾರಿಯಿಂದ ಹಾಯುತ್ತಿದ್ದರಂತೆ. ಹಲಕೆಲವರು ಹಿರಿ-ಯರಂತೂ ಬಾಯಿಯಲ್ಲಿ ಬೊಟ್ಟಿಟ್ಟು, "ನೋಡಿದಿರಾ ಸೋಜಿಗಾನ, ಆಗಿನ ಊರೂರಿಗೂ ಈಗಿನ ಊರೂರಿಗೂ ಎಷ್ಟು ವ್ಯತ್ಯಾಸ? ಆಗಿನದು ಹಳ್ಳಿ ಆಗಿದ್ದರ ಈಗಿನದು ಬಂಬೈ ಆಗೇದ ಬಂಬೈ...." ಎನ್ನುವರು.

ಊರ ಹೊರಗೆ ಆ ಸಾಧುವಿನ 'ಊರೂರಪ್ಪಾ' ಎಂಬ ಹೆಸ-ರಿನ ಶಿಲಾಲೇಖವುಳ್ಳ ಒಂದು ಸಮಾಧಿ, ಎದುರಿಗೊಂದು ಅಶ್ವತ್ಥ ಕಟ್ಟೆ, ಕಟ್ಟೆಯ ಮೇಲೊಂದು ಭರಮಪ್ಪದೇವರ ಕಲ್ಲು. ಇದೇ ಈ ಕಟ್ಟೆಯ ಮೇಲೆ ಊರೂರಪ್ಪನು ಗುಡುಗುಡಿಯನ್ನು ಸೇದುತ್ತ, ಬಂದ ಭಕ್ತರ ಕಷ್ಟಪರಿಹಾರಾರ್ಥವಾಗಿ ಕುಳ್ಳಿರುತ್ತಿದ್ದನಂತೆ. ಇರಲಿ.

ನಮ್ಮಜ್ಜನ ಮನೆಮಾರು, ಹಾಲು ಉಕ್ಕಿದಂತೆ, ಧನ-ಧಾನ್ಯ-ಸಂತತಿ-ಸಂಪತ್ತಿಗಳಿಂದ ಉಕ್ಕಿ ಬಂದದ್ದು ಆ ಮಹಾರಾಯನ ಪುಣ್ಯ-ದಿಂದಲೇ ಅಂತೆ. ನಮ್ಮ ತಾಯಿ-ತಂದೆಗಳು ನನಗಿದನ್ನು ಹೇಳು ತಿ.ದ ರು.

ನಮ್ಮ ತಂದೆಯಿನ್ನೂ ಚಿಕ್ಕವನಿದ್ದಾಗ ನಮ್ಮಜ್ಜ ಅವನನ್ನು ಹುಬ್ಬಳ್ಳಿಗೆ ಕಳುಹಿಸಿ ಕನ್ನಡ ನಾಲ್ಕನೆಯ ಇಯತ್ತೆಯ ವರೆಗೆ ಕಲಿಸಿದ್ದಕ್ಕೆ, ಊರೂರಿನ ಜನರೆಲ್ಲ ನಮ್ಮ ತಂದೆಯನ್ನು 'ಸಾಯಬಾ' 'ಸಾಯಬಾ' (ಸಾಹೇಬ) ಎಂದು ಕರೆಯತೊಡಗಿದರಂತೆ.

ಇದನ್ನು ನೋಡಿ ಹೇವಕ್ಕೆ ಬಿದ್ದು ನಮ್ಮೂರ ಕಲ್ಲನಗೌಡರು ತಮ್ಮ ಮಗನನ್ನೂ ಕಲಿಯಲಿಕ್ಕೆ ಇಟ್ಟರು. ಅವನ ಹೆಸರು ಬಾಬೂ-ಗೌಡ. ಆದರೆ ಒಂದು ದಿನ ಗೆಳೆಯರೆಲ್ಲರೂ ಕೂಡಿ ಗುಡ್ಡಕ್ಕೆ ಅತ್ತೀ ಹಣ್ಣು ತರಲಿಕ್ಕೆ ಹೋದಾಗ, ಈ ಎತ್ತರವಾಗಿ ಬಾಂಬುವಿನಂತೆ ಬೆಳೆದ ಬಾಬುವನ್ನು ಅವನ ಸ್ನೇಹಿತರು ನಗೆಯಿಂದ ಬಾಂಬೂಗೌಡ-ರೆಂದು ಕರೆದರು. ಮೊದಲೇ ಹಳ್ಳಿಯ ಊರು; ಕೇಳುವದೇನು ? ಹಾ, ಹಾ, ಅನ್ನುವಷ್ಟರಲ್ಲಿ ಈ ಸುದ್ದಿಯು ಕರ್ಣೋಪಕರ್ಣವಾಗಿ ಊರೆಲ್ಲ ಹಬ್ಬಿತು; ಅಂದಿನಿಂದ ಚಿಕ್ಕಮಕ್ಕಳು ಮೊದಲು ಮಾಡಿ ಅವನನ್ನು ಬಾಂಬೂಗೌಡರೆನ್ನಹತ್ತಿದರು, ಇರಲಿ. ಅಂತೂ ಬಾಂಬೂಗೌಡರಿಗೆ ತಂದೆಯವರು 'ಮುಳ್ಳಕ್ಕೀ (ಮುಲ್ಕೀ) ಪರೀಕಿಶೆ (ಪರೀಕ್ಷೆ)' ಮಾಡಿ-ಸಿಬಿಟ್ಟರಂತೆ.

ಅಷ್ಟರಲ್ಲಿ ಹೇಗೋ ನಮ್ಮೆಲ್ಲರ ದೈವಬಲದಿಂದ ಊರೂರಿಗೆ ಅದಾವುದೋ ಊರಿನ ಬೋರ್ಡಿನಿಂದ ಕನ್ನಡಶಾಲೆಯನ್ನು ಸ್ಥಾಪಿ-ಸುವ ಹುಕುಮು ಬಂದಿತು. ಆಯಿತು, ಇನ್ನೇನು ಬಾಂಬೂಗೌಡರೇ ಆ ಶಾಲೆಗೆ ಹೆಡ್‌ಮಾಸ್ತರರು; ಇನ್ನೂ ಒಬ್ಬಿಬ್ಬರು ಅವರೊಡನೆ ೫-೬ ಇಯತ್ತೆಗಳ ವರೆಗೆ ಕಲಿತು ಬಿಟ್ಟಿದ್ದವರು ಕೆಳಗಿನ ಮಾಸ್ತರರಾದರು.

ವರ್ಷೆರಡು ವರ್ಷಗಳಲ್ಲಿ ಬಾಂಬೂ ಮಾಸ್ತರರ ಪ್ರಯತ್ನದಿಂದ ಅರವತ್ತು ಗಂಡುಹುಡುಗರೂ, ಹದಿಮೂರು ಹೆಣ್ಣುಹುಡುಗಿಯರೂ ಸೇರಿದರು. ಆಗ ತನ್ನೆಲ್ಲ ವಿದ್ಯಾರ್ಥಿಗಳಿಗೆ ಓದಲಿಕ್ಕೆ ಚಿಕ್ಕದೊಂದು ಲಾಯಬ್ರರಿಯನ್ನು ಏರ್ಪಡಿಸಬೇಕೆಂದು ಮಾಸ್ತರರು ವಿಚಾರಿಸಿದರು; ಮತ್ತು ತನ್ನ ಹಲಕೆಲವು ಹುಡುಗರನ್ನು ಸಾಹಸದಿಂದ ಊರೂರಿನ

ಸುತ್ತುಮುತ್ತಲಿನ ಪೇಟೆಯೂರುಗಳಿಗೆ ಓಡಿಸಿ, ಧರ್ಮಾರ್ಥವಾಗಿ ಅವರಿಗೆ ಬೇಡವಾದ ಪುಸ್ತಕ-ಪತ್ರಿಕೆಗಳನ್ನು ತರಿಸಿ ಇಟ್ಟರು. ಶಕ್ಯವಿದ್ದಷ್ಟು ಶ್ರಮವಹಿಸಿ, ಬಾಂಬೂಗೌಡ ಹೆಡ್‌ಮಾಸ್ತರರು ತಮ್ಮ-ಹಳ್ಳಿಯ ಜನರ ಹಿತದ ಸಲುವಾಗಿ ಮನಸಾರೆ ಹೆಣಗಾಡಹತ್ತಿದರು. ಮುಂದೆ ಕೆಲದಿನಗಳಲ್ಲಿ ಏ-ಬೀ-ಸೀ-ಡೀ ಸುರುಮಾಡಿಸಿಬಿಟ್ಟರು.

ಇತ್ತ ನಾನು ಅದೇ ನನ್ನ ಮ್ಯಾಟ್ರಿಕ್ ಪರೀಕ್ಷೆಯನ್ನು ಮುಗಿಸಿ ದಣಿದದ್ದರಿಂದ, ಹಳ್ಳಿಯಲ್ಲಿಯೇ ನನ್ನ ಮೇ ತಿಂಗಳ ಸೂಟಿಯನ್ನು ಆನಂದದಿಂದ ಕಳೆಯಬೇಕೆಂದು ಬಂದಿದ್ದೆನು. ನಾನು ೪-೫ ವರುಷದವನಿರುವಾಗಲೇ ನನ್ನನ್ನು ನನ್ನ ಚಿಕ್ಕಪ್ಪನಲ್ಲಿ ಕಲಿಯಲಿಟ್ಟದ್ದರಿಂದ ನನಗೆ ಹಳ್ಳಿಯ ಸುದ್ದಿಯೇ ಗೊತ್ತಿರಲಿಲ್ಲ. ಬಂದ ಕೂಡಲೆ ಎಲ್ಲವನ್ನೂ ತಿಳಿದುಕೊಂಡೆನು. ನನ್ನನ್ನು ನೋಡಿ ಅಲ್ಲಿಯ ಜನರು, "ಆಯಿತು, ಇಂವಾ ಒಬ್ಬಾಂವಾ ನಮ್ಮ ಊರೂರಿಗೆ 'ಎಡ್ಡವದ್ದಾ ಭಾದಶಾ' ಆದ್ಹಾಂಗಾದಾ.... " ಎಂದು ಗುಣುಗುಟ್ಟಿದರು.

ಬಾಂಬೂಗೌಡ ಹೆಡ್‌ಮಾಸ್ತರರು ನನ್ನನ್ನು ಒಳ್ಳೆಯ ಪ್ರೀತಿಯಿಂದ ತಮ್ಮ ಶಾಲೆಗೆ ಕರೆದೊಯ್ದು ಎಲ್ಲವನ್ನೂ ತೋರಿಸಿದರು. ಅಷ್ಟು ಸಣ್ಣ ಹಳ್ಳಿಯ ಸಲುವಾಗಿ, ತಕ್ಕಮಟ್ಟಿಗೆ ಕಲಿತಂಥ ಮುದುಕರಾದ ಅವರು ಹೆಣಗಾಡುವದನ್ನು ನೋಡಿ ನನಗೆ ಬಹಳೇ ಆನಂದ-ವಾಯಿತು; ನನ್ನ ಸಲುವಾಗಿ ಚಹಾದ ಸ್ಪೆಶಲ್ ವ್ಯವಸ್ಥೆಯನ್ನು ಏರ್ಪಡಿಸಿದ್ದರು. ಚಹ ಕುಡಿಯುವಾಗ, ತಾವು ತಮ್ಮೂರಿನ ಸಲುವಾಗಿ ಇನ್ನೂ ಒಂದು ಹೊಸದಾದ ವಿಚಾರವನ್ನು ತಲೆಯಲ್ಲಿ ಹಾಕಿಕೊಂಡಿದ್ದರೆಂದು ಹೇಳಿದರು. ಒಂದು ಚಿಕ್ಕ ಹ್ಯಾಂಡ್-ಪ್ರೆಸ್ ತಂದು ಕೇವಲ ನೂರು ಪ್ರತಿಗಳ ಒಂದು ದೈನಿಕ ಹೊರಡಿಸುವದು. ಐವತ್ತು ಪ್ರತಿಗಳು ಊರಲ್ಲಿ ಹಂಚಲಿಕ್ಕೆ, ಇಪ್ಪತ್ತೈದು Exchange ಗಾಗಿ, ಇಪ್ಪತ್ತೈದು ತಮಗೆ ಈಗಾಗಲೆ ಸಹಾಯ ನೀಡುತ್ತಿದ್ದ ನೆರೆಹೊರೆಯೂರಿನವರಿಗೆ. ಹೀಗೆ ಮಾಡಿದರೆ, ದೂರದೂರದ ಸುದ್ದಿಯು ಜನರಿಗೆ ತಿಳಿದು, ಅವರು

ಓದಿಗೆ ಆಗ ಮಹತ್ತ್ವಕೊಟ್ಟು ತಮ್ಮೆಲ್ಲ ಮಕ್ಕಳನ್ನೂ ಶಾಲೆಗೆ ಕಳಿಸುವರೆಂದು ಅವರ ಮುಂದಿನ ಧೋರಣ; ನನಗೂ ಈ ವಿಚಾರವು ಸೈಯೆನಿಸಿತು.

ನನ್ನ ಕಡೆಯಿಂದ ಕೂಡಲೆ ಆಗಿಂದಾಗ ಕಲ್ಲಕತ್ತಿ (ಕಲ್ಕತ್ತೆ)ಗೆ ಹ್ಯಾಂಡ್-ಪ್ರೆಸ್ಸಿಗಾಗಿ ಆರ್ಡರ ಬರೆಯಿಸಿಕೊಂಡರು; ಮತ್ತು ದೊಡ್ಡ ದೊಡ್ಡ ಊರಿನ ವೃತ್ತ-ಮಾಸಿಕ ಪತ್ರಗಳ ಆಫೀಸುಗಳಿಗೂ ತಮ್ಮೆಲ್ಲ ಪತ್ರಿಕೆಗಳನ್ನು 'ಫ್ರೀ' ಕಳಿಸಬೇಕೆಂದು ಇಂಗ್ಲೀಷಿನಲ್ಲಿಯೇ ಬರೆಯಿಸಿದರು; ಅವರ ವಿಳಾಸಗಳು ನನಗೆ ಗೊತ್ತಿದ್ದುದರಿಂದ ಕೂಡಲೇ ಬರೆದುಬಿಟ್ಟೆ; ನನ್ನಿಂದಲೇ ಕಲಿತುಕೊಂಡು ಮಾಸ್ತರರು ಅವೆಲ್ಲ ಪತ್ರಗಳಿಗೂ ಕೂಡಲೇ ಇಂಗ್ಲೀಷಿನಲ್ಲಿಯೇ ಸುಂದರವಾಗಿ ಸಹಿ ಮಾಡಿದರು.

ಮುಂದೆ ನನ್ನ ರಿಝಲ್ಟು ಆಯಿತು; ಈಗಿನ ದಿನಮಾನಕ್ಕನು ಸರಿಸಿ ಕುಂಟುತ್ತ ಕೂರುತ್ತ ಪಾಸ್ ಕ್ಲಾಸಿನಲ್ಲಿ ತೇರ್ಗಡೆಯಾದೆ. ನಮ್ಮ ತಂದೆ ಹಮ್ಮಿಣಿ ಕಟ್ಟಿಕೊಂಡು ನನ್ನನ್ನು ಕಾಲೇಜಿನಲ್ಲಿ ನಡೆ-ನುಡಿಯ ಹಚ್ಚಲೆಂದು ಬಂದರು; ಒಂದು ವರುಷದ ವರೆಗೂ ನನಗೆ ಮುಂದೆ ಹಳ್ಳಿಯ ಸುದ್ದಿಯೇ ತಿಳಿಯಲಿಲ್ಲ. ಹೆಡ್ ಮಾಸ್ತರರು ಮುದುಕರು.... ಮರೆತರೋ ಏನೋ? ನಾನಂತೂ, ನನ್ನ ಡೌಲಿ-ನಲ್ಲಿಯೇ ಕಾಲ ಕಳೆದು, ಅವರಿಗೊಂದು ಅಕ್ಷರವನ್ನೂ ಬರೆಯಲಿಲ್ಲ.

ಅಂತೂ ಮರುವರುಷ ಮೇ ತಿಂಗಳಲ್ಲಿಯೇ ಮತ್ತೆ ಹೆಡ್ ಮಾಸ್ತರರಲ್ಲಿಗೆ ಹೋದೆ; ಹೊಸತಾಗಿ ಒಂದು ಚಂಡಿನಾಟದ ಬೈಲು ಮಾಡಿದ್ದರು. ನಾಲ್ವತ್ತು ರೂಪಾಯಿಗಳ ಹ್ಯಾಂಡ್ ಪ್ರೆಸ್ಸಿನ ಮೇಲೆ "ಬಕಪಕ್ಷಿ" ಎಂಬ ದೈನಿಕ ಪತ್ರವು ಹೊರಡಲನುವಾಗಿತ್ತು. ಪ್ರೊಪ್ರಾಯಿಟರ, ಪಬ್ಲಿಶರ, ಪ್ರಿಂಟರ ಎಲ್ಲವೂ ಬಾಂಬೂಗೌಡ-ಹೆಡ್ ಮಾಸ್ತರರೇ! ನಾನು ಹಳ್ಳಿಗೆ ಬಂದ ದಿನವೇ ಅದು "ಔಟ" ಆಗಿತ್ತು. "ತಮ್ಮ, ನಿನ್ನ ಕೈಗುಣದಿಂದ ನನ್ನ ದೈನಿಕಪತ್ರ ಹೊರಬಿತ್ತು.

ನಾಳೀ ನೀ ಕಲ್ತು ಬಂದೆಂದ್ರ, ಥೊಡ್ಡಾವಾಗಿ ಇದನ್ನs ಇನ್ನಿಷ್ಟು ಸುಧಾರಿಸಿಗೊಂಡು ಸಾಗ್ಸು ಆತು ಎನ್ನುತ್ತ ನನ್ನ ಕೈಗೆ ಅದನ್ನು ಕೊಟ್ಟರು. ಓದಿದೆ, ಖೊಕ್ಕೆಂದು ನಗುವಂತಾಯಿತು. ಹೇಗೋ ಕೈವಸ್ತ್ರವನ್ನು ಬಾಯಿಯಲ್ಲಿ ತುಂಬಿಕೊಂಡು ಕೆಮ್ಮಿನ ಮೇಲೆ ಹಾಕಿದೆನು.

ಸುಮಾರು ಹದಿನೈದು ದಿನಗಳ ಹಿಂದೆ ಕಾಲೇಜಿನ ಹಾಸ್ಟಲಿನಲ್ಲಿ ದೊಡ್ಡ ದೊಡ್ಡ ಇಂಗ್ಲೀಷ-ಮರಾಠಿ-ಕನ್ನಡ ದೈನಿಕಗಳಲ್ಲಿ ಓದಿದ ವಿಷಯದ ಅನಾವರಣಸಮಾರಂಭವು ಅಂದು ನಮ್ಮೂರ ಪೇಪರಿನಲ್ಲಿ ಆಗಿತ್ತು.

"ಮಾಸ್ತರ ಸಾಹೇಬರೆ, ಹದಿನೈದು ದಿವಸದ ಹಿಂದಿನ ಸುದ್ದೀನ ಈಗ ಹಾಕೀರೆಲ್ಲಾ ? ....ಮತ್ತ ನಿಮ್ಮ ಪೇಪರಿಗೆ 'ಬಕಪಕ್ಷಿ' ಅಂತ ಯಾಕ ಹೆಸರಿಟ್ಟೇರಿ ? " ಎಂದು ಕೇಳುವ ಧೈರ್ಯವನ್ನೇನೋ ಮಾಡಿದೆ. ಮುದುಕರೆಲ್ಲಿ ಸಿಟ್ಟಾಗುವರೊ ಎಂದು ಎದೆಯಲ್ಲಿ ಚಕ್ಕೆಂದಿತು. ಬಾಂಬೂಗೌಡರು ವಿಚಾರಪೂರ್ವಕವಾಗಿ ಉತ್ತರವಿತ್ತರು: " ತಮ್ಮಾ, ನೀ ಕೇಳಿದ್ದೆಲ್ಲಾ ಖರೆ. ಹದಿನೈದು ದಿನದ ಹಿಂದಿನ ಸುದ್ದಿಂತ ನನಗ ಗೊತ್ತದ; ಆದ್ರ ಈ ಸುದ್ದಿರ ನಮ್ಮ ಊರೂರಿನ ಜನಕ್ಕ ಇಷ್ಟು ದಿವಸ ಎಲ್ಲಿ ತಿಳದಿತ್ತು ? ಅಲ್ದ—ನಮ್ಮ ಊರೂರಿಗೆ ವಾರಕ್ಕೊಮ್ಮೆ ಟಪಾಲು ಬರ್‍ತದಪ್ಪಾ. ಮತ್ತ ಈ ಹಳ್ಳೀ ಊರೊಳಗ ಯಾವ ಕೇಳ್ತಾನೊ ಇದನ್ನೆಲ್ಲಾ ? ನೀ ಒಬ್ಬಾಂವಾ ಶಾಣ್ಯಾ ಇವೊತ್ತ ಕೇಳ್ದೀ—ನಾಳೆ ಹೊಂಟೆ ಪುಣೆ ಮುಂಬೈಕಡೆ!...."

" ಇನ್ನ 'ಬಕಪಕ್ಷಿ' ಅಂತೀಯಾ ವನದೊಳಗಿನ ಬಕಪಕ್ಷಿ ಹ್ಯಾಂಗ ಸಿಕ್ಕಲ್ಲಿಂದ ಹುಳಹುಪ್ಪಡಿ ಸಂಗ್ರಹ ಮಾಡಿಕೊಂಡು ತನ್ನ ಹೊಟ್ಟೀ ಭರತೀ ಮಾಡಿಕೋತದ ನೋಡು, ಹಾಂಗ ನನ್ನ 'ಬಕಪಕ್ಷಿ' ಸುದ್ದಾ ಸಿಕ್ಕ ಪೇಪರಿನೊಳಗಿಂದ ಸುದ್ದೀ ನೆಗವಿಹಾಕಿ ತನ್ನ ಭರತೀ ಮಾಡಕೋತದ. ಅದಕs ಭಾಳವಿಚಾರಮಾಡಿ ಹೆಸರಿಟ್ಟೇನಿ.

ಒಪ್ಪತದೋ ಇಲ್ಲೊ ? ಮನಸ ಬಿಚ್ಚಿ ಹೇಳೀನಂತ ನಗಬ್ಯಾಡಾ, ಈಗಿನ ಹುಡುಗ್ರು ನೀವು ಹರೇಮಿ.... ! "

" ಛೀ-ಛೀ-ಹಾಂಗೇನಿಲ್ರೀ ಮಾಸ್ತರ್ರs. ನೀವು ಮಾಡಿದ್ದೆಂದಾರೆ ಸುಮಾರಾದೀತs ! " ಎಂದು ಆವರನ್ನು ಹೊಗಳಿ ಹೊರಬಿದ್ದೆಸು.

ದಾರಿಗುಂಟ ನಡೆದಾಗ 'ಬಾಂಬೂಗೌಡ ಸಂಪಾದಕರು-ಬಕಪಕ್ಷಿ ಹೊರಡಿಸೋದು........ ಹೆಸರಿಗೆ ತಕ್ಕ ಕೆಲಸ' ! ಎಂದು ಮನಸಿನಲ್ಲಿ ಅನ್ನುತ್ತಿದ್ದೆ.

---

# ನಡೆದುಬಂದ ಲಕ್ಷ್ಮಿ

ನಾನು ಹೇಳುತ್ತಿರುವದು ಹೋದ ವರುಷ ನಮ್ಮೂರಲ್ಲಿ ಜರುಗಿದ ಸಂಗತಿ. ಆ ಮಾತಿಗೆ ಆರಂಭವಾದದ್ದು ಭಾರತ ಹುಣ್ಣಿಮೆಯ ದಿವಸವೇ; ಅದು ಕೊನೆಗಂಡದ್ದು ಮುಂದೆ ಒಂದೇ ವಾರದ ಅಲ್ಪಾವಧಿಯಲ್ಲಿ.

ಭಾರತ ಹುಣ್ಣಿಮೆಗೆ ಎಲ್ಲಮ್ಮನ ಜಾತ್ರೆಯಾಗುವದುಂಟು. ಆಗ ಎಲ್ಲ ಕಡೆಯ ಭಕ್ತರಂತೆ, ನಮ್ಮೂರ ಆಕೆಯ ಒಕ್ಕಲೆನಿಸಿ-ಕೊಳ್ಳುವ ಎಲ್ಲ ಜನರೂ ಅಲ್ಲಿಗೆ ಹೋಗಿ ಸಡಗರದಡಿಗೆಮಾಡಿ, ದೇವಿಗೆ ಕಾಯಿ-ಹಣ್ಣುಗಳನ್ನು ಮೀಸಲಿಟ್ಟು, ಹಡ್ಡಲಿಗೆ ತುಂಬಿ ಬರುವರು. ಆಗ ಗುಡ್ಡದಲ್ಲಿ ನೀರಿನ ಬರ ಮಾತ್ರ ಬಹಳ. ಕೆಳಗಿನ ಜಾತಿಯ ಜನರು ಬರುವರು. ಬಲು ಹೊಲಸು ಮಾಡುವರು. ಔಷಧ-ಸ್ವಚ್ಛತೆಗಳ ಬಗ್ಗೆ ಆಗ ಸರಕಾರದ ವ್ಯವಸ್ಥೆ ಅಲ್ಲಿ ಸಾಕಷ್ಟಿದ್ದರೂ, ಎಲ್ಲಿ ನೋಡಿದಲ್ಲಿ ಹೊಲಸೇ! ಇರಲಿ.

ವಿಶೇಷವಾಗಿ ಹೋಗುವ ಜನರೆಂದರೆ, ಮುತ್ತೈದೆ ಹುಣ್ಣಿಮೆ-ಯೆಂದು ಹುಂಬ ಜನರಲ್ಲಿ ದೇವಿಯ ಹೆಸರಲ್ಲಿ ಬಿಟ್ಟುಕೊಂಡ ಹಲವು ಹೆಣ್ಣುಮಕ್ಕಳು. ಆಗ ಗುಡ್ಡಕ್ಕೆ ಬಂದು ಹೊಸಬಳೆಗಳನ್ನಿರಿಸಿಕೊಂಡು, ದೇವಿಯ ಚಾಕರಿ ಮಾಡುತ್ತಾರೆ. ವರ್ಷಾನುಗಟ್ಟಲೆ ದೂರದೂರದಿಂದ ಭಕ್ತರು ಬಂದು ದೇವಿಗೆ ಏರಿಸಿದ, ಬೆಲೆಬಾಳುವ ಜರತಾರೀ ಸೀರೆ-ಕುಪ್ಪಸಗಳ ಕಕ್ಕಡಗಳನ್ನು ಮಾಡಿ, ಲೆಕ್ಕವಿಲ್ಲದೆ ಸುಡುತ್ತ ಪೌಳಿಯಲ್ಲಿ ಭಕ್ತಿಯಿಂದ ಕುಣಿದಾಡುತ್ತಾರೆ. ಎಷ್ಟೋ ಜೋಗಿತಿಯರು-ಹುಣ್ಣಿಮೆಯ ಮುಂಚಿತವಾಗಿಯೇ ಎಂಟಾನೆಂಟು ದಿನ ಬಂದವರು-ಅಮಾವಾಸ್ಯೆಯ ವರೆಗೆ ಗುಡ್ಡವನ್ನೇ ಹಿಡಿದಿರುವದುಂಟು. ಆಗವರು, ಜಾತ್ರೆಗೆ ಬಂದ ಭಕ್ತರು ತುಂಬಿದ ತಮ್ಮ ಹಡ್ಡಲಿಗೆಯೂಟವನ್ನೇ ಉಂಡುಕೊಂಡು ಇರುವರು; ಮಹಾತಾಯಿಯ

ಹೆಸರಲ್ಲಿ ಭಕ್ತರು ಅವರಿಗೆ ಕೊಟ್ಟ ಹಡ್ಲಿಗೆಯ ದಕ್ಷಿಣೆಯನ್ನು ಹಾಗೆಯೆ ಸಂಗ್ರಹಿಸಿಕೊಂಡು ಅಮಾವಾಸ್ಯೆಗೆ ಊರಿಗೆ ಹಿಂತಿರುಗುತ್ತಾರೆ. ಹೀಗೆಷ್ಟೋ ಜನ ಜೋಗಿತಿಯರು, ದೇವಿಯ ಹೆಸರಲ್ಲಿ ಬಿಟ್ಟುಕೊಂಡವರು, ಅಲ್ಲಿಗೆ ಹೋಗಿ ರೊಕ್ಕ ಮಾಡಿಕೊಂಡು ಬರುವರು.

ನಮ್ಮೂರ ಅಗಸೆಯ ಛಾವಣಿಯಲ್ಲಿರುವ ದ್ಯಾಂವಕ್ಕ (ದೇವಕಿ) ನೂ ಈ ದೇವಿಯ ಹೆಸರಲ್ಲಿ ಜೋಗಿತಿ. ಜಾತಿಯಿಂದ ಬೇಡರವ-ಳಾಗಿದ್ದರೂ ದ್ಯಾಂವಕ್ಕ ಬಲು ವಿಚಾರವಂತಳು. ಪ್ರಾಯದವಳಿದ್ದಾಗ ನಮ್ಮೂರ ಗೌಡರ ರೈತನಾದ ನಿಂಗನೊಂದಿಗೆ ಬಾಳುವೆಮಾಡಿ ಕೆಲ ವರುಷ ಸುಖವಾಗಿದ್ದಳಂತೆ. ಮುಂದೆ ಅವನಿಗೆ ಕುಡಿಯುವ ಚಟ ಹತ್ತಿತೆಂದು, ಒಂದು ದಿನ ಕದನವಾಗಿ, ತನ್ನ ಮನೆಗೆ ಕಾಲಿಕ್ಕ-ಕೂಡದೆಂದು ಅವನಿಗೆ ಕಟ್ಟಪ್ಪಣೆ ಮಾಡಿದಳಂತೆ. ಆಗವಳಿಗೆ ವಯಸ್ಸು ಸುಮಾರು ಇಪ್ಪತ್ತೆರಡು. ಒಂದೇ ಒಂದು ನಾಲ್ಕೈದು ವರುಷದ ಮಗುವಿನ ತಾಯಿ. ನಿಂಗನು ಅವಳಿಗೆ " ನೋಡ ಹಾಂ ದ್ಯಾಂವಿ, ನಂಗ ಹೊರಗ ಹಾಕಾಕ್ಹತ್ತೀ, ಬಾಳ ಜ್ವಾಕೀ ಅಂದೆ! ಮುತ್ತೆ ಮೂರ ದಿಂದಾಗ ಹೊಟ್ಟೆಗಿಲ್ಲಾ.... ಆ ನನ್ ಧಣೀ ಅಂತ ಕರಿಗಿರ್‍ಯಾಕ ಬಂದೀ........ನಾಯೇನ ಆಗ....ಬ-ಬರಾಕಿಲ್ಲಾ. ಕುಡೀದ ಗಂಡ್ಸಿನ ತೆಪ್ಪ ತೆಗೀತಿದ್ಯಾ ಚಲವೀ? ನೋ-ನೋ-ನೋಡು, ಬಲು ಹು-ಶಾರೀ-ಅಂದೆ !" ಆಗ ದ್ಯಾಂವಕ್ಕ—"ಛೀ ಏಳ ಗಂಡ್ಸಽ! ನಾನ್ ಬೆದರ್ ಸಾಕ ಬರ್‍ತೀಯಾ? ಏನ್ ನಿನ್ನ ಸಂಗಾಟ ಇದ್ರೂ ನನ್ ರಟ್ಟೀ ಮುರಿದು ಒಂದ ರೊಟ್ಟಿ ನಾ ತಿನ್ನೂದ ನನಗೇನ ಬಿಟ್ಟಿಲ್ಲಾ. ಹ್ಯಾಂಗೂ ಬ್ಯಾಡರ ಮೂಳ್ಯಾಗಿ ಹುಟ್ಟಿ ಬಂದೇನಿ, ದುಡದಕ್ಯಾರಾ ತಿಂತೇನಿ. ನಿನ್ನ ಹೆಸರ್ಲೆ ಒಂದ್ಮಗಾ ಆಗೇತಿ. ಅದನ್ನಽ ಉಣಿಸಿ ತಿನಿಸಿ-ಬೆಳಿಸಿಗೊಂಡಕ್ಯಾರಾ ಇರ್‍ತೇನಿ. ರಟ್ಯಾಗ ಬಲಾ ಇರೂತನಕಾ ಕೈಯಾಗ ನಾಕ ರೊಕ್ಕಾ ಮಾಡಿಕೊಂಡ, ಮಗ್ಗ ಆಽಟ ಇದ್ಯೇವ ಕಲಿಸಿ, ಮುಪ್ಪಿನ್ಯಾಗ ಸುಕಾ ಉಣ್ತೇನಿ ."

ನಿಂಗನು ಮೊದಲೇ ಕುಡಿದವನು; ಅವಳ ಅಭಿಮಾನ-ಧೈರ್ಯಗಳ ಮಾತಿನಿಂದ ಇನ್ನಿಷ್ಟು ರೇಗಿದನು. "ಇಲ್ಲಿ ಬಿಡ, ನಿನ್ನ ಸೋಗ ಸಾಕೂ! ಗಂಡ್ಸೀನಾದಾರ ಇಲ್ದ ಯಾವ ಹೆಂಗಸು ಬಾಳೇವ ಮಾಡಿ ಮುಂದಕ ಬರ್ತಾಳ?"

"ಚೀ ಬಿಡ ಮೂಳಾ. ಗಂಡ ಸತ್ತ ರಂಡೀಮುಂಡೀ ಹಾಂಗ ಕಾಲಾ ಕಳ್ಯಾಕ ನಾ ಗಟ್ಟ್ಯಾದೇನಿ....ಇಟ್ ದಿನಾ, ನಾಕಾರ ವರ್ಸದ್ದಿನಾ ನಿನ್ನ ಚಾಕ್ರೀ ಮಾಡಿ ಗರ್ತೀ ಹಾಂಗ ಬಾಳೇವ ಮಾಡಿದರೂ ಮಂದಿ ನನಗ ಮತ್ತ ಬಸವೀನ ಅನ್ನಿಲ್ಲ? ಇನ್ ವ್ಯಾಗ ಹಾಂಗs ಇದ್ದ ಕ್ಯಾರಾ ಗರತಿ ಗಂಗವ್ವ ಅನಿಸಿಗೊಂಡ ಸಾಯ್ತೀನಿ." ನಿಂಗ ಕೈಯೆತ್ತಿದ. ಧೈರ್ಯವಂತಳಾದ ದ್ಯಾಂವಕ್ಕನು, ಚಟ್ಟನೆ ಅವನ ರಟ್ಟೆ ಕಿತ್ತು ಹೊರಕ್ಕೆ ಹಾಕಿ ಅಗಣೀ ಹಾಕಿದಳು.

ಈಗ ನಮ್ಮ ದ್ಯಾಂವಕ್ಕನ ವಯಸ್ಸು ಸುಮಾರು ೩೫-೪೦ ಕ್ಕೆ ಬಂದಿದೆ. ಹೂವಿನ ಸುಗ್ಗಿಯಲ್ಲಿ ಹೂವಿನ ತೋಟದ ಗುತ್ತಿಗೆ ಹಿಡಿದು ಹೂವುಗಳನ್ನು ಮಾರಿ, ಒಂದಕ್ಕೆರಡು ರೊಕ್ಕ ಮಾಡಿದಳಂತೆ; ಮಾವಿನ ಸುಗ್ಗಿಯಲ್ಲಿ ಮಾವಿನ ತೋಟಗಳನ್ನು ಹಿಡಿದು, ಸಾಹುಕಾರರ ಬಳಿ ಒಂದು ರೂಪಾಯಿಗೆ ತಿಂಗಳಿಗೆ ಎರಡಾಣೆಯಂತೆ ಬಡ್ಡೀ ತೆತ್ತು, ತೋಟದಲ್ಲಿ ಹಗಲು ರಾತ್ರಿಯೆನ್ನದೆ, ಮಳೆ-ಗಾಳಿ-ಚಳಿಯೆನ್ನದೆ, ಕೂಳು ನೀರುಗಳಿಗೆ ಕೂಡ ಅಗ್ಗವಾಗಿ, ನಿದ್ರೆಕಟ್ಟಿ, ಜೊತೆಗೆ ಎರಡು ಹೆಣ್ಣಾಳು, ಎರಡು ಗಂಡಾಳುಗಳನ್ನಿಟ್ಟುಕೊಂಡು, ರಕ್ತದ ನೀರನ್ನು ಮಾಡಿದಳಂತೆ. ಇಂದಿಗೂ ಅವಳು ಪೇರಲ-ಮಾವಿನ-ತೋಟಗಳನ್ನು ಹಿಡಿಯುವದನ್ನು ಬಿಟ್ಟಿಲ್ಲ. ಗಂಡಸಿಗಿಂತ ಧೈರ್ಯವಂತಳಾಗಿ ದುಡಿಯುವದನ್ನು ನಾನು ಕಣ್ಣಾರೆ ಕಾಣುತ್ತಿರುವೆ.

ಮೂವತ್ತೈದು ವಯಸ್ಸಿನ ನಡುಹರೆಯದವಳಾಗಿದ್ದರೂ ಇನ್ನೂ ಅವಳ ಮೈಕಟ್ಟು ಅದೆಷ್ಟು ಚೊಕ್ಕ! ಎಳೆಹರೆಯದ ಕಳೆಯು

ಅವಳ ಮುಖದಿಂದ ಹೊರಹೊಮ್ಮುತ್ತಿದೆ. ಮೈತುಂಬ ತನ್ನ ದುಡಿತದ ಪ್ರತಿಫಲವೆಂದು ಗಳಿಸಿದ ಚಿನ್ನದಾಭರಣಗಳು—ಕೈಯಲ್ಲಿ ಬಂಗಾರಬಳೆ-ಗೋಟು-ಬಿಲ್ವರಗಳು, ಬೆರಳುಗಳಲ್ಲಿ ಅಷ್ಟಪೈಲು ಮೊಹರಿನುಂಗುರಗಳು, ಕೊರಳಲ್ಲಿ ಗಟ್ಟಿಮುಟ್ಟಿಯಾದ ಐವತ್ತು ಪುತ್ಥಳಿಗಳ ಸರವೊಂದು, ಗೆಜ್ಜಿಟೀಕೆ-ಸರಿಗೆ-ಸರದಾಳಿಸಾಮಾನೊಂದಷ್ಟೇರಿನದು. ಉಡುವದು ಯಾವಾಗಲೂ ತೋಪುತೆನೆ ತಿರುವಿದ ಗದಗಿನ ಸೀರೆಯನ್ನೇ! ತೊಡುವದು ಬೆಂಗಳೂರಂಚಿನ ಜರದ ಕುಪ್ಪಸಗಳನ್ನೇ! ದುಡಿತದ ವ್ಯಾಯಾಮದಿಂದ ಪುಷ್ಟವಾಗಿ ಬೆಳೆದ ತೋಳುಗಳಲ್ಲಿ ಮೂರು ಸೇರಿನ ಬಂಗಾರದ ಒಂಕಿಗಳು ಒಪ್ಪುತ್ತಿವೆ. ನೀಟಾದ ಮೂಗು, ಮೂಗಿನಲ್ಲೊಂದು ಮೂಗುತಿ. ದುಂಡಾದ ಮುಖ. ಗುಲಾಬಿಯೆಂದರೆ ಭಾರೀ ಗುಲಾಬಿಯಾದ ಬಣ್ಣ. ಘರಸ್ಪೇಟಿಯಂಚಿನ ತೋಪುತೆನೆ ತಿರುವಿದ ಕರೇ ಕಸೂತಿಯ ಸೀರೆಯನ್ನುಟ್ಟು, ತೋಳುಗಳಲ್ಲಿ ನಟ್ಟುನಿಂತ ಗುಲಾಬಿ ಅಥವಾ ಹಸಿರು ಬೆಂಗಳೂರು ಜರದ ಕುಪ್ಪಸ ತೊಟ್ಟು, ತಲೆಯ ಮೇಲೆ ಪೇರಲ-ಮಾವಿನ ಹೆಡಿಗೆಯನ್ನಾಗಲಿ, ಮುಸಂಬಿ ಕಿತ್ತಳೆಗಳ ಬುಟ್ಟಿಯನ್ನಾಗಲಿ, ಅಂದಚೆಂದ ಹೂವುಗಳ ತಟ್ಟಿಯನ್ನಾಗಲಿ ಹೊತ್ತುಕೊಂಡು, ನಗೆಮೊಗದಿಂದ ನಮ್ಮಂಗಳ ಕಟ್ಟೆಯನ್ನು ಮೆಟ್ಟುತ್ತ ಬಂದಳೆಂದರೆ, ನನಗಂತೂ ಆಕೆಯು ಚೆಂಗಳಿಕೆವ್ವನ ಹಾಗೆ ಕಾಣುವಳು.

ನಾನು ಹೇಳಲು ಹೊರಟದ್ದು ದ್ಯಾಂವಕ್ಕನ ಮಗನ ಸಣ್ಣ ಸುದ್ದಿಯೊಂದನ್ನು. ಆದರೆ ಅದು ಒತ್ತಟ್ಟಿಗೆ ಉಳಿದು ದ್ಯಾಂವಕ್ಕನ ಚರಿತ್ರವೇ ನಡೆದುಬಂದಿತು. ಇದೂ ನಿಜ; ಸಂಗತಿಯು ದ್ಯಾಂವಕ್ಕನ ಮಗ ಸಾದೇವನದಿದ್ದರೂ ಅದು ದ್ಯಾಂವಕ್ಕನಿಗೇ ಹೆಚ್ಚಾಗಿ ಗೌರವಕೊಡುವಂತಹದಾಗಿದೆ. ಅಲ್ಲದೆ ಗೋಡೆಯನ್ನು ಕಟ್ಟುವ ಮೊದಲು ತಳಹದಿಯು ಬೇಕಲ್ಲವೆ? ಹಾಗಾದರೆ ಸಾದೇವನ ಚರಿತ್ರೆಗೆ ಇದು ತಳಹದಿಯಾಯಿತೆನ್ನಿರಿ.

ಸಾದೇವನಿಗೆ ಆಗ ಇಪ್ಪತ್ತು ವರುಷಗಳಾಗಿರಬೇಕು. ಹತ್ತು ವರುಷಗಳ ಹಿಂದೆ, ದ್ಯಾಂವಕ್ಕನ ಹತ್ತಿ ಹೊಂದಿದ ಆಪ್ತೇಷ್ಟರು ತಮ್ಮ ತಮ್ಮಲ್ಲಿ ಮಕ್ಕಳ-ತಮ್ಮಂದಿರ ಏಳು ಮದುವೆಗಳನ್ನು ಹೂಡಿದರಂತೆ. ಒಂದೇ ಹಂದರದಲ್ಲಿ, ಒಂದೇ ದಿವಸ, ಒಂದೇ ಮುಹೂರ್ತಕ್ಕೆ ಏಳು ಮದುವೆಗಳಾಗಬಾರದೆಂದು, ನಮ್ಮ ದ್ಯಾಂವಕ್ಕನೂ ತನ್ನ ಮಗ ಸಾದೇವನ ಮದುವೆಯನ್ನೂ ತನ್ನ ತಮ್ಮನ ಮಗಳಾದ ಮೂರು ವರುಷದ ನೀಲಿಯೊಡನೆ ಹೂಡಿ, ಎಂಟನೆಯ ಮದುವೆಯಿಂದ ಹಂದರವನ್ನು ಸರಿಪಡಿಸಿ, ನಾಲ್ಕು ಜನರ ಕಡೆಯಿಂದ ಹೌದೆನಿಸಿ-ಕೊಂಡು ಬಿಟ್ಟಳಂತೆ! ಈಗವಳ ಸೊಸೆ ಎಷ್ಟೆಂದರೂ ಚಿಕ್ಕವಳೇ ಇರುವಳು. ಅತ್ತೆಯ ಮನೆಗೆ ಬರುವಷ್ಟು ಇನ್ನೂ ದೊಡ್ಡವಳಾಗಿಲ್ಲ. ವರ್ಷದಲ್ಲಿ ಒಮ್ಮೆ ತಾಯಿ-ತಂದೆಗಳೊಡನೆ ಎಲ್ಲಮ್ಮನ ಜಾತ್ರೆಗೆಂದು ಬಂದಾಗ ಕೆಲದಿನ ಅತ್ತೆಯ ಮನೆಯಲ್ಲಿದ್ದು ಉಂಡು-ತಿಂದು ಮತ್ತೆ ತನ್ನೂರಿಗೆ ಹೋಗುವಳು.

ಸಾದೇವನು ಶಾಲೆಗೆ ಬಹಳ ದಿವಸ ಹೋಗಲಿಲ್ಲ. ಕನ್ನಡ ೩-೪ ಇಯತ್ತೆಯಾಗುವಷ್ಟರಲ್ಲಿ ಗರಡೀಸಾಧಕಕ್ಕೆ ಮೆಚ್ಚಿ ಶಾಲೆ ಬಿಟ್ಟನು. "ಕಾಗದಾ ಓದೂ ಪೂರ್ತೆ ಬಂತು ಸಾಕು, ನನ್ನ ಮಗ್ಗ ರ ಏನ ಕಡಿಮ್ಯಾಗೇತಿ?" ಎಂದು ತಾಯಿಯು ಮುಂದೆ ಕಲಿಯಲು ಆಗ್ರಹ ಮಾಡಲಿಲ್ಲ. ಸಾದೇವನೂ ಒಳ್ಳೆಯ ಗುಣವಂತ-ಚೆಲುವ. ದಿನಾಲು ನಸುಕಿನಲ್ಲೆದ್ದು ಗರಡೀಸಾಧಕ ಮಾಡುತ್ತಿದ್ದನು. ಎರಡೆರಡು ಸೇರು ನೊರೆಹಾಲು ಕುಡಿದು ಅರಗಿಸುವನು. ಗುಲಾಬಿ-ಕಿತ್ತಳೆ ಬಣ್ಣದ ಪಟಕಾ ಸುತ್ತುವನು; ಯಾವಾಗಲೂ ಬಿಳಿಯ ಅರಿವೆಗಳನ್ನೇ ಧರಿಸುವನು; ರೇಶಿಮೆ-ಅಲಪಾಕಿನ ಜಾಕೀಟುಗಳನ್ನು ತೊಡುವನು. "ನನ್ ಮಗಾ ನೋಡ್ರಿ ಬಾಯಾರ, ಹ್ಯಾಂಗ ಕಾಮಣ್ಣಾಗ್ಯಾನ!" ಎಂದು ಅಭಿಮಾನಪಟ್ಟುಕೊಳ್ಳುವ ದ್ಯಾಂವಕ್ಕನ ಮುಖದಿಂದಲೇ ಆಕೆಯ ಮಗನ ಬಣ್ಣನೆಯನ್ನು ಕೇಳಬೇಕು.

ಭಾರತಹುಣ್ಣಿಮೆಯಿನ್ನೂ ಎಂಟು ದಿನವಿರುವಾಲೇ ತನ್ನ ತಮ್ಮನಿಗೆ ಕಾಗದ ಬರೆಯಿಸಿದಳು ದ್ಯಾಂವಕ್ಕ. ಹುಣ್ಣಿವೆಯ ಮುನ್ನಾ ದಿವಸ ಮೊದಲನೇ ಮೋಟಾರಿಗೆ ಹೊರಡುವದು ಖಂಡಿತವೆಂತಲೂ ಅಷ್ಟು ಹೊತ್ತಿಗೆ ತನ್ನ ತಮ್ಮನು, ಹೆಂಡತಿಮಗಳೊಂದಿಗೆ ಊರಿಗೆ ಬಂದಿರಬೇಕೆಂತಲೂ ಒತ್ತಾಯಪಡಿಸಿದ್ದಳು.

ಗುಡ್ಡದಲ್ಲಿ ಹದಿನೈದು ದಿನಗಟ್ಟಲೆ ತಾನು ಇರುವವಳೆಂದು— ಹುರಕ್ಕಿಯ ಹೋಳಿಗೆ, ಅಂಬೋಡೆ, ಗಾರಿಗೆ, ಪುಠಾಣಿಯ ಉಂಡಿ, ಸುರಮಾಲಾಡು ಮೊದಲಾದವುಗಳನ್ನು ಮಾಡಿಟ್ಟುಕೊಂಡು ಸಿದ್ಧ ಳಾದಳು. ಪ್ರವಾಸದ ಸಾಹಿತ್ಯವನ್ನು ಸಜ್ಜುಗೊಳಿಸುವಾಗ, ದ್ಯಾಂವಕ್ಕ ಮುಖ್ಯವಾಗಿ ದೇವಿಯ ಚಾಮರ-ಕವಡೀಮಾಲೆಗಳನ್ನು ತೊಳೆದು ಕಟ್ಟಲು ಮರೆಯಲಿಲ್ಲ.

ಆಚೇನಾಳೆ ಹುಣ್ಣಿವೆಯೆಂದರೆ, ಮುನ್ನಾದಿನ ಸರಿರಾತ್ರಿಯ-ಲ್ಲಿಯೆ ಎದ್ದಳು. ಮನೆಯನ್ನು ಸಾರಿಸಿ, ರಂಗವಲ್ಲಿ-ಭಂಡಾರ-ಕುಂಕು ಮಗಳಿಂದ ಸಿಂಗರಿಸಿದಳು. ತಾನೂ ಎರಕೊಂಡು, ಮಗನನ್ನೆಬ್ಬಿಸಿ ಎರೆದಳು. ಎಲ್ಲಮ್ಮನ ಗುಡ್ಡದಲ್ಲಿ ಗಲಾಟೆ ಬಹಳ. ಕಳವಾದಾವೆಂದು ಭಾರೀ ಎನ್ನಿಸಿಕೊಳ್ಳುವ ಆಭರಣಗಳನ್ನು ಒಂದು ಮಡಿಕೆಯಲ್ಲಿ ಹಾಕಿ ದೇವರ ಜಗುಲಿಯ ಮುಂದೆ ತಾಯಿ-ಮಗ ಇಬ್ಬರೂ ಕೂಡಿ ಹೂಳಿ ಭದ್ರವಾಗಿಟ್ಟರು. ಅಷ್ಟು ಹುಗಿಯಲು ತಗ್ಗು ತೆಗೆಯುವಾಗ, ಸಾದೇ-ವನು ತನ್ನ ತಾಲೀಮು ತಪ್ಪೀತೆಂಬ ಹೆದರಿಕೆ ಹಾಕಿ, ಹುಣ್ಣಿಮೆಯ ದಿವಸ ಸಾಯಂಕಾಲವೇ ತನ್ನನ್ನು ಊರಿಗೆ ಕಳಿಸಬೇಕೆಂದು ತಾಯಿಯ್ಯ ಕಡೆಯಿಂದ ಒಪ್ಪಿಗೆ ಪಡೆಯಲು ಮರೆಯಲಿಲ್ಲ. ವರ್ಷದ ಅವಧಿಯಲ್ಲಿ ಏನಿಲ್ಲೆಂದರೂ ನೂರಿನ್ನೂರು ರೂಪಾಯಿಗಳ ಬೆಳ್ಳಿಯ ಕಡಗಗಳನ್ನು ಹೊಡೆದುಕೊಂಡು ಬರುವನು ಕುಸ್ತಿಯಲ್ಲಿ. ಎಂದಮೇಲೆ ತಾಯಿ ಅವನ ಮಾತಿಗೆ ವಿರುದ್ಧವಾಗಿ ಎಂದಿಗಾದರೂ ನಡೆದುಕೊಳ್ಳುವಳೆ ?

ಇಷ್ಟೆಲ್ಲ ತಾಯಿಮಕ್ಕಳ ಮಾತು-ಕತೆಗಳಾಗುವಷ್ಟರಲ್ಲಿ ದ್ಯಾಂವಕ್ಕನ ಕಿವಿಗೆ ಉಧೋ-ಉಧೋ ಎಂಬ ಗರ್ಜನೆಯು, ಸುಮಾರು ಒಂದು ಕೂಗಳತೆಯ ಮೇಲಿಂದ ಕೇಳಬಂದಿತು. ಆಗ ಚುಮುಚುಮು ಬೆಳಗಾಗಿತ್ತು. ಕೈಯಲ್ಲಿ ಕಂದೀಲನ್ನು ಹಿಡಿದುಕೊಂಡ್ರ ದ್ಯಾಂವಕ್ಕ ಹೊರಗೆ ಬಂದಳು. ಕೊಲ್ಹಾರಿಯನ್ನು ಕಟ್ಟಿ ಸವಾರಿ-ಯಿಂದ ಸಜ್ಜಾಗಿ, ಕೂಟಿನ ಹತ್ತರ ಒಂದು ಬಂಡಿಯು ಬರುತ್ತಿದ್ದಂತೆ ಮಸುಮುಸುಕಾಗಿ ಕಂಡಿತು. ಚಿಗುರುಗೋಡಿಗೆ ಗೊಂಡೆಗಳನ್ನಿಳಿಬಿಟ್ಟು ಕೊಂಡು, ಹಣೆಗೆ ಕನ್ನಡಿಯ ಹಣೆಕಟ್ಟು ಕಟ್ಟಿಕೊಂಡು, ಮೈಗೆ ಬಣ್ಣದ ನಕ್ಷತ್ರಗಳನ್ನು ಬರೆಯಿಸಿಕೊಂಡು, ಡುಬ್ಬದ ಮೇಲೆ ಜೂಲು ಹಾಕಿ ಕೊಂಡು ಶೃಂಗಾರವಾಗಿ, ಕೊರಳೊಳಗಿನ ಗಂಟೆಗಳ ಮಂಜುಳನಾದ-ದೊಡನೆ, ತಾಳದಲ್ಲಿ ಹಾರಿಗ್ಗಾಲನ್ನು ಪುಟಿಸುತ್ತ ಬರುತ್ತಿರುವ ಹೋರಿಗಳು ಕಂಡವು. ಬಂಡಿಯೊಳಗಿನ ಜನರು ಉಧೋ ಎಂದ ಕೂಡಲೆ, ಅದನ್ನೇ ತಾವೂ ಹೇಳುತ್ತಿರುವವೋ ಎನ್ನುವಂತೆ ಹುರುಪಿ-ನಿಂದ ಹೊಡೆದ ಆ ಹೋರಿಗಳ ಡುರುಕಿಯನ್ನು ಕೇಳಿದ ಬಳಿಕಂತೂ, ದ್ಯಾಂವಕ್ಕನಿಗೆ ತನ್ನ ತಮ್ಮ ಬಂದನೆಂಬುದು ಮನದಟ್ಟಾಯಿತು. ಅಷ್ಟರಲ್ಲಿ ಗಾಡಿಯು ಬಾಗಿಲಿಗೇ ಬಂದಿತು. ಒಳಗಿನಿಂದ ಸೊಸೆಯು ಜಿಗಿದವಳೇ "ಎತ್ತೀ, ಬಂದ್ವೀ" ಎನ್ನುತ್ತ ಕಾಲಿಗೆ ಬಿದ್ದಳು. ಸೊಸೆಗೆ ಪ್ರೀತಿಯಿಂದ ಲಟಿಕೆ ಮುರಿದು, ಒಳಗೆ ಹೋಗಿ ಕಾಲಿಗೆ ನೀರು ತಂದು ಕೊಟ್ಟು, ದ್ಯಾಂವಕ್ಕ ಎಲ್ಲರಿಗೂ ಫಲಾಹಾರಕ್ಕೆ ಹಾಕಿದಳು. ಆವಳ ತಮ್ಮನೂ ಅಕ್ಕನನ್ನು ಸಂತೋಷಗೊಳಿಸಲಿಕ್ಕೆಂದು ಸವಾರಿ ಬುಟ್ಟಿಯ ತುಂಬ ಫರಾಳವನ್ನು ಮಾಡಿ ತಂದಿದ್ದನು.

"ಎಕ್ಕಾ, ಮೋಟಾರಿಗೆ ಹೋಗೂನೋ, ಏನು ಇದ ಬಂಡ್ಯಾಗನs ಹೊಂಡತೀಯೋ ?" ಎಂದು ತಮ್ಮ ಕೇಳಿದ. ಅದಕ್ಕೆ ದ್ಯಾಂವಕ್ಕ "ಅದ್ಯಾಕೋ ತಮ್ಮಾ, ಹಿಂತಾ ನಸುಕಿನ್ಯಾಗ ನಾನ್ನ ಮನಿತಂಕಾ ಬಸವಣ್ಣದೇವರು ಕರ್‍ಯಾಕ ನಡಕೊಂಡ ಬಂದಿರಲಾಕ—

ದೇವರದ ನಾ ಎಂದಿಗಾರ ಸುಮಾರ ಮಾಡೇನ?" ಎಂದವಳೇ ಸಿದ್ಧಳಾಗಿ ಕೀಲಿಹಾಕಿ ಎದ್ದಳು.

ದಾರಿಯಲ್ಲಿ ಎರಡು ವಸತಿಗಳನ್ನು ಹಾಕಿ, ಮರುದಿವಸ ಹುಣ್ಣಿಮೆಯ ದಿನವೇ ನಸುಕಿನಲ್ಲಿ ಗುಡ್ಡಕ್ಕೆ ಬಂದು ಮುಟ್ಟಿದರು. ಅಲ್ಲಿ ಅವನ ಸ್ನಾನಪೂಜಾದಿ ವಿಧಾನಗಳು, ಊಟ ಎಲ್ಲವೂ ಮುಗಿಯ ಬೇಕಾದರೆ ಮಧ್ಯಾಹ್ನವೇ ಆಯಿತು. ಸಾದೇವನಿಗೆ ಊರ ಕಡೆಗೆ ಹೋಗಲು ಅಪ್ಪಣೆ ಸಿಕ್ಕಿತು. "ಜ್ವಾಕಿ ಹಾಂ ನನ್ ಮಗನ. ಇಕಾ ಹಿಡೀ ಒಂದ ನಾಕಾರ ರುಪಾಯಿ ನಿನ್ ಹಂತ್ಯಾಕ ಇರ್ಲಿ, ನಿನಗ ತಿನ್ನಾಕ ಉಣ್ಣಾಕ ಬೇಕಾದ್ರ. ಭಾಳ ಜ್ವಾಕೀ ಅಂದೆ" ಎಂದು ಹೇಳಿ ಮುದ್ದಿಟ್ಟು ಕಳಿಸಿದಳು.

ಸಾದೇವನು ಇನ್ನೂ ಮಧ್ಯಾಹ್ನವಿರುವಾಗಲೇ ಊರಿಗೆ ಬಂದು ಮುಟ್ಟಿದನು. ತಾಯಿಯ ಆಗ್ರಹದಿಂದ ಹೊಟ್ಟೆ ಭಾರವಾಗುವಷ್ಟು ಹೋಳಿಗೆಯೂಟವು ಬಿದ್ದಿತ್ತು. ಸಾದೇವನು ಅಷ್ಟು ಮಿತಿಮೀರಿ ಎಂದೂ ಉಂಡವನಲ್ಲ; ಪೈಲವಾನನು. ತನ್ನ ಕತೆಯಲ್ಲಿಯೇ, ಸಾತ್ವಿಕ-ಪೌಷ್ಟಿಕ ಆಹಾರವನ್ನೇ ಸೇವಿಸುತ್ತಿದ್ದನು. ಆಗಿನ ಆ ಊಟದಿಂದ ಅವನಿಗೆ ನಿದ್ರೆ ಬರಹತ್ತಿತು— ಆಲಸ್ಯವುಂಟಾಯಿತು. ಮನೆಗೆ ಬಂದವನೇ ಮಲಗಿಬಿಟ್ಟವನು ಎಚ್ಚರಾದಾಗ ನೋಡುತ್ತಾನೆ, ರಾತ್ರಿ ಹತ್ತು ಬಡಿದು ಹೋಗಿತ್ತು. ಹಾಲಿನಾಕೆಯ ಮನೆಗೆ ಹೋಗಿ ಸ್ವಲ್ಪ ಚಟದ ಪೂರ್ತಿ ಹಾಲು ಕುಡಿದು ಬಂದನು.

* * *

ಸುಮಾರು ರಾತ್ರಿಯ ಎರಡು ಗಂಟೆಯಾಗಿರಬಹುದು. ಮೊದಲೇ ಭಾರತ ಹುಣ್ಣಿಮೆ. ಅಂದು ಹಿಟ್ಟು ಚೆಲ್ಲಿದಂತೆ ಬೆಳದಿಂಗಳು ಬಿದ್ದಿತ್ತು. ತಣ್ಣನ್ನ ಚಳಿಯು ಬಿಟ್ಟಿತ್ತು. ಮಧ್ಯರಾತ್ರಿಯಾದುದರಿಂದ ಎಲ್ಲೆಡೆಯಲ್ಲಿಯೂ ಸದ್ದಡಗಿ ಶಾಂತವಾಗಿತ್ತು—ತಣ್ಣಗಾಗಿತ್ತು.

ಭಾವಣಿಯ ಎದುರಿಗೆ ಜಡ್ಜೀಯವರ ತೋಟಕ್ಕೆ ಹೊಂದಿ' ಜೋಯಿಸರ ಮನೆತನದ ಹಿರಿಯರು ಕಟ್ಟಿಸಿದ ಒಂದು ಮಾಟಾದ

ಹನುಮಪ್ಪನ ಗುಡಿಯು ಇದ್ದದ್ದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಇಷ್ಟು ದಿವಸ ಮೊದಲು ಆ ಗುಡಿಯು ಹಾಳಾಗಿಯೇ ಬಿದ್ದಿತ್ತು. ಕಳ್ಳರ-ಕಾಕರ ಕಳವಿನ ಸಾಮಾನುಗಳ ಲೆಕ್ಕದ ಮನೆಯಾಗಿತ್ತಂತೆ; ಆದರೆ ಇತ್ತೀಚಿನ ಮೂರು ನಾಲ್ಕು ವರ್ಷಗಳಿಂದಲೂ ಮುಂಜಾನೆ ಪೂಜೆ ನಡೆಯುತ್ತಿದೆ. ಸಾಯಂಕಾಲಕ್ಕೆ ಮಾತ್ರ ಅಲ್ಲಿ ಯಾರೂ ಸುಳಿಯುವದಿಲ್ಲ; ರಾತ್ರಿಯಾದ ಮೇಲೆ ಹಾಯುವದಂತೂ ದೂರಾಗಿಯೇ ಉಳಿಯಿತು. ಹಾವುಗಳು, ಕಳ್ಳರು, ದೆವ್ವ-ಭೂತಗಳು ಬರುವದುಂಟು ಕತ್ತಲಾದ ಮೇಲೆ ಆ ಗುಡಿಯಲ್ಲಿ— ಎಂದು ಜನರೆಬ್ಬಿಸಿದ ಗುಲ್ಲೇ ಇದಕ್ಕೆ ಕಾರಣವಾಗಿದ್ದಿತು.

ಹಾಗಾದರೆ ಇಂತಹ ಸ್ಥಳದಲ್ಲಿ, ಇಂತಹ ಹೊತ್ತಿನಲ್ಲಿ ಆ ಗುಡಿಯಲ್ಲಿ ಯಾರೋ ಗುಜುಗುಜು ಮಾತನಾಡುವಂತಿದೆಯಲ್ಲ? ಗುಡಿಯ ಬಾಗಿಲು ಪೂರ್ವಾಭಿಮುಖವಾಗಿರುವದರಿಂದ, ಆಗ ಚಂದ್ರಮನು ಏರುತ್ತಲೇ ಹೊರಟಿರುವ ವೇಳೆಯಿದ್ದುದರಿಂದ, ಗುಡಿಯಲ್ಲಿ ಮಂದವಾದ ಚಂದ್ರಪ್ರಕಾಶವು ಬಿದ್ದಿತ್ತು. ಸಣ್ಣದೊಂದು ಹಾಸಿಗೆಯ ಸುರುಳಿ, ಒಂದು ಅರಿವೆಯ ಗಂಟು—ಇವುಗಳನ್ನು ನಡುವೆ ಇಟ್ಟುಕೊಂಡು, ಹನುಮಪ್ಪನೆದುರಿಗೆ ಇಬ್ಬರು ತರುಣ-ತರುಣಿಯರು ಕುಳಿತಿದ್ದಾರೆ. ತರುಣನು ೨೦-೨೨ ವಯಸ್ಸಿನವನು; ತರುಣಿಗೆ ಹದಿನೇಳು-ಹದಿನೆಂಟು.

ತರುಣಿಯು ಕೇಳಿದಳು: " ಈಗ ಹೊಂಟ್ರೆ ಯಾವ ಗಾಡೀ ಸಿಕ್ಕೀತು ? ಗಾಡಿಗೆ ರೊಕ್ಕ ಹ್ಯಾಂಗ ? "

" ಮನ್ಯಾಗಿಂದನಕಾ ಸುಳುವಿಲ್ಲದ್ಹಾಂಗ ಹೊರಬಿದ್ದು ಬಂದೀಯೋ ಇಲ್ಲೋ? ಆ ರೊಕ್ಕದ್ದೂ ಆ ಗಾಡೀದೂ ಪಂಚೇತಿ ನಿನಗ್ಯಾಕ ಬೇಕ, ದುರ್ಪತಿ ? (ಅವಳ ಹೆಸರು ದ್ರೌಪದಿ.) ಅಷ್ಟು ಅರುವು ಇಲ್ದ ನಾ ಬರ್ತಿದ್ದೇನಲ್ಲ? ಇಕಾ ನೋಡು " ಎಂದು ಪಟಕಾದ ಚುಂಗಿನೊಳಗಿಂದ ಒಂದು ಸಣ್ಣ ಗಂಟನ್ನು ಹೊರಗೆ

ತೆಗೆದು ಬಿಚ್ಚಿದನು. ಎರಡು ಒಂಕಿಗಳು, ಒಂದು ಸರಿಗೆ ಇವುಗಳನ್ನು ಮುದ್ದೆಮಾಡಿ ಬಿಗಿದದ್ದಿತ್ತು; ಮೇಲೆ ಹತ್ತು ರೂಪಾಯಿಯ ೪-೬ ನೋಟುಗಳು. ಅವಳೂ ಸೆರಗಿನೊಳಗಿಂದ ಒಂದು ಮುತ್ತಿನ ಪುರಾತನ ಕಾಲದ ಮೂಗುತಿಯನ್ನು ತೆಗೆದಳು. "ಏನೋ ಪರಸಂಗ ಬಿದ್ರ ಇರ್ಲಿಂತ ನಾನೂ ತಂದೇನಿ ನೋಡು ನನ್ನೊಡ್ಯಾ. ಇವೊತ್ತು ನೀನು ಹ್ಯಾಂಗ ನನ್ನ ಮನೀಮಾರು ಬಿಡಿಸೀದಿ, ಅತ್ತೀನ್ನ ಗಂಡನ್ನ ಬಿಡಿಸೀದಿ, ಊರ ಬಿಡಸಾಕ ನಿಂತೀದಿ, ಮತ್ತ ನಿನ್ನ ಬೆನ್ನಿಗೆ ಕಟಗೊಂಡ ಹೊಂಟೇದಿ, ಹಾಂಗ ಕಡಿತನಕಾನೂ ನಿನ್ನ ಬೆನ್ನಾಸರಾನs ನನಗಿರೂ ಹಾಂಗ ಮಾಡ್ಬೇಕ, ಕಂಡ್ಯಾ ! ಇಲ್ದಿದ್ರ, ನನ್ನ ಬಡಬಡದ ಕ್ಯಾರಾ ಹಣ್ಣಗಾಯಿ ನೀರ್ಗಾಯಿ ಮಾಡಿ, ಸುಟ್ಟ ಸುಟ್ಟ ಸುಣ್ಣಾ ಮಾಡ್ತಾಳ........ ಆತೂ, ಅಂವಾ-ಅಂವದಾನಲ್ಲಾ-ನನ್ ಹ್ಯಾದ ಜಲ್ಮದ ರಿಣಗೇಡಿ ವೈರೀ-ಗಂಡಾ ಅಂತನಿಸಿಗೊಳ್ಳಾಂವಾ-ಅಂವಾ ಮದವೀಗಂಡಾ ಅಂತ ಹಕ್ಕ ತೋರ್ಸಾಕ, ನನ್ನ ಹೊಡದಕ್ಯಾರಾ ಅರಜೀವಾ ಮಾಡಿ ಮಣ್ಣಾಗ ಮುಚ್ಚತಾನ. ಆ ಕೊಲೀ—ಆ ಗೋಳು — ನಿನಗೇನ ಬ್ಯಾರೆ ಅರಿಯೇದ ಮಾತಲ್ಲ-ನಾನಗಂತೂ ವ್ಯೈಯುಂಡs ಹೋಗೇತಿ........" ಕಣ್ಣೀರು ಮಿಡಿಯಹತ್ತಿದಳು.

"ದುರ್ಪತೀ, ಇಕಾ-ಈ ನಮ್ಮಪ್ಪ ಹನುಮಪ್ಪನ ಮುಂದ ಕುಂತ ಕಿರೇವಮಾಡಿ ಹೇಳ್ತೀನಿ, ನನ್ನವ್ವನಕಾ ನಾನ್ನ ಮಾತ ಮೀರಿ ನಿನ್ನ ಹೊರದೂಡಾಕಿಲ್ಲಾ. ಒಂದ ವ್ಯಾಳೇಕ ಹೊರದೂಡಿದ್ರ-ನಾನೂ ಹೊರಬಿದ್ದು ನಿನ್ನ ಬೆನ್ನಿಗೆ ಹಚಿಗೊಂಡು ಭಿಕ್ಷಾ ಬೇಡೇನು-ಊರೂರ ಅಲ್ದೇನು-ಉಪಾಸಿದ್ರೂ ನಿನ್ನ ಸಂಗಾಟನ ಸಂತೋಸದಿಂದಿದ್ದೇನು-ಆದ್ರ ಆದ್ರ-ನಿನ್ನ ಕೈಬಿಡಾಕಿಲ್ಲಾ ಅಂತ ತಿಳೀ ನೀನು........ ಜರ ಒಂದ ವ್ಯಾಳ್ಯೇಕ ಹಂತಾ ಪರಸಂಗ ಬಂದು, ನಾನೂ ನೀನೂ ಮನ್ಯಾಗ ಊರಾಗ ಕೇರ್ಯಾಗ ಬ್ಯಾಡಾದರ, ಈ ಲೋಕದಾಗ ಬ್ಯಾಡಾದ್ರ........ ನಿನ್ನ ಎದೀಗೆ ಕಟಗೊಂಡು ಭಾಂವೀ ಕೇರೀ

ಪಾಲಾದೇನ ಹೊರ್ತು, ನಿನ್ನ ಅಗಲಾಕಿಲ್ಲಾ ನೆನಪಿಡು........ ನಿನ್ನ ಸಂಗತೀ ಎಂದೆಂದೂ ಎಡ್‌ನೇ ಬಾವಾ ಮಾಡಾಕಿಲ್ಲಾ— ”

“ ಇಟ್ಟೆ ಧೀರೇವ ಹೇಳಿದ್ರು ಸಾಕೋ ನನ್ನ ದೇವ್ರ. ಇಕಾ ಈ ದೇವರ ಮುಂದ ಕುಂತು ನಿನ್ನ ಪಾದಾ ಸಾಕ್ಷೀಮಾಡಿ ನಾನೂ ಹೇಳ್ತೇನಿ. ‘ ನೀನು ನನ್ನ ಅಂತಾಕರಣದ ಒಡ್ಯಾ-ನೀನs ನನ್ನ ದೇವ್ರು-ನೀನs ನನ್ನ ಗಂಡಾ-ನನ್ನ ಪಂಚಪರಾಣಾ! ” ಎಂದು ಉಕ್ಕಿ ಬಂದ ಕಂಠದಿಂದ ಬಿಕ್ಕಿ ಬಿಕ್ಕಿ ಅಳಹತ್ತಿದಳು.

“ ಹಾಂಗಾರ ಹೊಂಡೂದ ಹೊಂಟೇದಿ, ಸುಖ-ಸಮಾದಾನದ ಮನಸೀಲೆ ಹೊಂಡ ನೋಡೂನು ? ನಿನ್ನ ಪಿರೀತಿ ನನ್ನ ಮ್ಯಾಲಿದ್ದದ್ದ ಜರ ಕರೇವಿದ್ರ-ಅಳಬ್ಯಾಡ, ನಾ ನೋಡಲಾರೆ........ ”

ಹೀಗೆಂದು ತರುಣನು ಅವಳನ್ನು ತನ್ನ ಕಾಲ ಮೇಲಿಂದ ಎಬ್ಬಿಸಿ ಸಂತೈಸಿ ಸಮಾಧಾನಪಡಿಸಿದನು.

“ ಹಾಂಗೂ ಹೊಂಟೇವಿ, ಹೀಂಗೂ ಹೊಂಟೇವಿ, ನಾಕ ದಿನಾ ಸುಕಾ ಉಂಡರ ಬರೂನs ದುರ್ಪತಿ ? ”

ಇಬ್ಬರಿಗೂ ಒಂದು ಬಗೆಯ ಆನಂದ. ಒಬ್ಬರ ಹೆಗಲ ಮೇಲೊಬ್ಬರು ತಲೆಯನ್ನಿರಿಸಿ, ಕೆಲಹೊತ್ತು ಸುಮ್ಮನೆ ಕುಳಿತರು. ನಾಲ್ಕಾರು ನಿಮಿಷ ಸ್ತಬ್ಧವಿತ್ತು. ಕಂಟೆಯಲ್ಲಿ ಸುಳುಸುಳಿಂದು ಸಪ್ಪ-ಳಾಯಿತು. ಗುಡಿಯ ಎದುರಿಗೆ ರಸ್ತೆಯ ಮೇಲೆ ಟಾಂಗಾ ನಿಂತಂತಾ-ಯಿತು.

“ ರಾಯ್ರು, ಗಾಡಿಗೆ ನಡೀರಿ, ನಿಂದ್ರೂ ಹಾಂಗಿಲ್ಲಾ, ಹೊತ್ತಿಗೆ ಬರಾಬರಿ ಬಂದೇನಿ. ”

ತರುಣಿಗೆ ಕಣ್ಸನ್ನೆ ಮಾಡಿ ತರುಣನು ಎದ್ದನು.

ತರುಣನು ಮೊದಲೇ ಟಾಂಗಾದವನಿಗೆ ಹೇಳಿಟ್ಟಿರಬೇಕು. ತನಗಾಗಿ ತನ್ನ ಪ್ರಿಯತಮನು—ತನ್ನ ಹೃದಯದ ಒಡೆಯನು ಎಷ್ಟು ಕಷ್ಟಪಡುತ್ತಿರುವನು ಎಂದವಳಿಗೆ ರೋಮಹರ್ಷವಾಯಿತು.

ಟಾಂಗಾ ಸ್ಟೇಶನ್ನಿಗೆ ಬಂದಿತು. ಮುಂಬಯಿಗೆ ಹೋಗುವ ಗಾಡಿಯೂ ಬಂದಿತು. ಇಬ್ಬರೂ ಫರ್ಸ್ಟ್‌ಕ್ಲಾಸಿನ ತಿಕೀಟು ತೆಗೆದು ಕುಳಿತರು. ರಾತ್ರಿಯ ವೇಳೆಯಾದ್ದರಿಂದ ಗಾಡಿಯಲ್ಲಿ ಗಲಾಟೆ ವಿಶೇಷವಾಗಿರಲಿಲ್ಲ. ಫರ್ಸ್ಟ್‌ಕ್ಲಾಸಿನಲ್ಲಿಯಂತೂ ಯಾರೂ ಇರಲಿಲ್ಲ. ಹೊರಟ ಇಪ್ಪತ್ತು ತಾಸುಗಳೊಳಗಾಗಿ ಮುಂಬಯಿಗೆ ಬಂದು ಮುಟ್ಟಿದರು. ಗಾಡಿಯನ್ನಿಳಿದು ಮೊದಲು ಚಿನಿವಾಲಗಟ್ಟಿಗೆ ಹೋದರು.

ನಮ್ಮ ಹಿಂದುಸ್ಥಾನಕ್ಕೆ ಮೊದಲೇ ಬಡತನ-ಬರಗಳು ಹೆಚ್ಚು. ಅದಕ್ಕಾಗಿ ಎಲ್ಲಿ ನೋಡಿದಲ್ಲಿ ಅಸತ್ಯದ, ಅಪ್ರಾಮಾಣಿಕತೆಯ, ಸ್ವಾರ್ಥದ ವ್ಯಾಪಾರವೇ ಕಂಡುಬರುತ್ತಿದೆ.

ಮೋತೀಬಝಾರದಲ್ಲಿ ಒಂದು ಅಂಗಡಿಯ ಕಟ್ಟೆಯ ಮೇಲೆ ಕುಳಿತಿದ್ದ ಒಬ್ಬ ಇರಾಣೀ ವ್ಯಾಪಾರಸ್ಥನ ಬಳಿಗೆ ಬಂದರು; ತಮ್ಮ ಬಳಿಯಿದ್ದ ಒಡವೆಗಳನ್ನು ಮಾರಲಿಕ್ಕೆ ಕೊಡುವದಾಗಿ ಅವನಿಗೆ ಹೇಳಿದರು. ಅವೆಲ್ಲವುಗಳನ್ನೂ ಅವನು ನಾಲ್ಕೈದು ನೂರು ರೂಪಾಯಿಗಳಿಗೆ ಕೇಳಿದನು; ಹುಡುಗರಿಗೆ ವ್ಯಾಪಾರ ಬಗೆಹರಿಯಲಿಲ್ಲ; ಹಿಂತಿರುಗಿದರು. ಇರಾಣಿಯು, ತನ್ನ ಹೊರತು ಮತ್ತೆಲ್ಲಿ ಹೋಗುತ್ತಾರೆ ?—ಹುಡುಗರು ಅತ್ತಿತ್ತ ಸುಳದಾಡಿ ಮತ್ತೆ ಬರುವರೆಂದು ಧಾರಣೆಯನ್ನು ಒಮ್ಮೆಲೇ ಏರಿಸಲಿಲ್ಲ.

ತರುಣರು ಪೇಟೆಯನ್ನು ಸುತ್ತಿಸುತ್ತಿ ಸುಳಿದಾಡಿದರು. ಆ ಇರಾಣಿಯುವನ ಅಂಗಡಿಯೊಂದೇ ತಮ್ಮ ವ್ಯಾಪಾರಕ್ಕೆ ಅನುಕೂಲವಾಗಿದೆಯೆನಿಸಿ ಮರಳಿ ಮೂರು-ನಾಲ್ಕು ತಾಸಿನಲ್ಲಿ ಅಲ್ಲಿಗೇ ಬಂದುಬಿಟ್ಟರು. ಮುಂಬಯಿಯಂತಹ ಪಟ್ಟಣಕ್ಕೆ ಹುಡುಗರಿಬ್ಬರೂ ತೀರ ಹೊಸಬರು. ಇರಾಣಿಯುವನು ಆಗ ಅಲ್ಲಿ ಇರಲಿಲ್ಲವೆಂಬುದು ಅವರಿಗೆ ಗೊತ್ತಾಗಲಿಲ್ಲ. ಅವನ ಅಂಗಡಿಯೆ ತಮಗೆ ಸಿಕ್ಕಲೊಲ್ಲದೆಂದು ಅವರ ತಿಳುವಳಿಕೆ. ಹುಳುಹುಳು ನೋಡುತ್ತ ಪೇಟೆಯನ್ನೆಲ್ಲ ಸುತ್ತುತ್ತ ತಿರುಗಾಡುತ್ತಿ

ರುವ ಇವರನ್ನು, ಅದೇ ಆ ಇರಾಣಿಯವನ ಅಂಗಡಿಯಲ್ಲಿ ಮತ್ತೆ ಹೊಸದಾಗಿ ಅಂಗಡಿ ಹೂಡಿದ ಮುದುಕನೋರ್ವನು, ಬಹುತೀಕ್ಷ್ಣ ದೃಷ್ಟಿಯಿಂದ ನೋಡಿದನು. ಅವರು ಏತಕ್ಕಾಗಿ ಹಾಗೆ ಸುಳಿದಾಡುತ್ತಿರಬಹುದೆಂಬುದನ್ನು ಕೂಡಲೇ ತರ್ಕಿಸಿದನು; ಕಣ್ಸನ್ನೆ-ಕೈಸನ್ನೆ ಮಾಡಿ ತನ್ನ ಬಳಿಗೆ ಮೆಲ್ಲನೆ ಅವರನ್ನು ಕರೆದನು—ತೀರ ಮೆಲ್ಲಗೆ ಕೇಳಿದನು: "ಮಕ್ಕಳೇ, ನೀವು ಬಂದದ್ದೆಲ್ಲ ನನಗೆ ಗೊತ್ತಿದೆ—ಏನೋ ಕಳವಿಲೆ ಮಾರುವದಿದೆಯಲ್ಲವೇ? ........ಬನ್ನಿರಿ........ ಒಳಕ್ಕಾದರೂ ಬನ್ನಿರಿ. ನಿಮಗೆ ಪ್ರವಾಸದಿಂದ ಆಯಾಸವಾಗಿರಬಹುದು, ಹಸಿವೆ ನೀರಡಿಕೆಗಳಾಗಿರಬಹುದು; ಮೊದಲು ಸ್ವಲ್ಪ ಫಲಾಹಾರ ಮಾಡಿರಿ, ಬನ್ನಿರಿ."

ತರುಣರಿಗೆ ಅಪರಿಚಿತ ಸ್ಥಳದಲ್ಲಿ, ಅಂತಹ ದೊಡ್ಡ ಪಟ್ಟಣದಲ್ಲಿ ತಮ್ಮಂತಹ ಸಣ್ಣ ಹುಡುಗರನ್ನು ಮೊದಲು ತಿನ್ನಿರಿ-ಬನ್ನಿರಿ ಎಂದು ಕರೆಯುವ ಓರ್ವ ಸಭ್ಯಗೃಹಸ್ಥನಾದ ಮುದುಕನನ್ನು ಕಂಡಕೂಡಲೆ ಆನಂದವಾಯಿತು. ಅತ್ತಿತ್ತ ನೋಡುತ್ತ ತಟ್ಟನೆ ಒಳಹೊಕ್ಕರು.

ಮುದುಕನು ಅವರಿಗೆ ಹೊಟ್ಟೆತುಂಬ ಬಗೆಬಗೆಯ ಫಲಾಹಾರವನ್ನು ತಿನಿಸಿ, ಮೊದಲು ಅವರ ಮನಸ್ಸನ್ನು ಶಾಂತಗೊಳಿಸಿದನು. ಇಬ್ಬರೂ ಆ ಮುದುಕನ ಆದರಾತಿಥ್ಯಗಳಿಗೂ, ಸವಿನುಡಿಗಳಿಗೂ ಮರುಳಾದರು. ಅಲ್ಲದೆ, ತಾವು ಸದ್ದಿಲ್ಲದೆ ಸಾಧಿಸಬೇಕಾದ ಕಾರ್ಯವು ಅವನಿಂದ ಮಾತ್ರ ಸಫಲವಾಗುವದೆಂಬದನ್ನೂ ಅವರು ಅರಿತುಕೊಂಡರು. ಆ ಸರಾಫನು ಕಳವಿನ ಆಭರಣಗಳನ್ನು ದಕ್ಕಿಸಿಕೊಳ್ಳುವವನಿರಲಿಕ್ಕೆ ಸಾಕೆಂದು ಅವರಿಗೆ ಮನದಟ್ಟಾಯಿತು. ಪಟಕಾದ ಚುಂಗಿನೊಳಗಿಂದ ಮೂರು ಸೇರಿನ ಬಂಕಿಗಳ ಹಾಗೂ ಒಂದೂವರೆ ಸೇರಿನ ಸರಿಗೆಯ ಮುದ್ದೆಯು ಹೊರಬಿದ್ದಿತು ಸೀರೆಯ ಸೆರಗಿನೊಳಗಿಂದ ಮೆಲ್ಲನೆ ಮೂಗುತಿಯು ಇಣಿಕುತ್ತ ಹೊರಗೆ ಬಂದಿತು. ಮುದುಕನ ಬಾಯಿಯಲ್ಲಿ ನೀರು ಬಿಟ್ಟವು. ಸಾವಿರಾರು ರೂಪಾಯಿ ಬೆಲೆ

ಬಾಳುವ ಒಡವೆಗಳನ್ನು ನೂರಾರು ರೂಪಾಯಿಗಳಿಗೆ ಮಾರಿದ್ದಾಯಿತು. ಹುಡುಗರು ಇನ್ನೂ ಕೆಲವೊಂದಷ್ಟು ಹಣವನ್ನು ಕೊಡಿರೆಂದು ಕೇಳಿದಾಗ, ಮುದುಕನು ಅವರಿಗೆ ಪೋಲೀಸರ ಬೆದರಿಕೆ ಹಾಕಿದ. ಹುಡುಗರಿಗೆ ತಮ್ಮ ಚಕ್ಕಂದಕ್ಕೆ ಸಾಕಷ್ಟು ಹಣವು ದೊರೆತದ್ದರಿಂದ ಅವರೂ ತಮ್ಮ ಹಾದಿಗೆ ಹೊರಟರು. ಮುದುಕ ಮತ್ತೆ ಕರೆದ. " ಮಕ್ಕಳೇ, ನಿಮಗೆ ಇಳಕೊಳ್ಳಲಿಕ್ಕೆ ಸ್ಥಳವು ಬೇಕಿದ್ದರೆ, ಇನ್ನೆಲ್ಲಿಯೂ ಹೋಗಬೇಡಿರಿ; ನಾನು ವ್ಯವಸ್ಥೆ ಮಾಡಿಕೊಡುವೆ ! " ಹುಡುಗರಿಗೂ ' ರೋಗಿ ಬಯಸಿದ್ದೂ ಹಾಲು, ವೈದ್ಯನು ಕೊಟ್ಟದ್ದೂ ಹಾಲಾ ' ಯಿತು. ಅದೇ ಅಂಗಡಿಯ ಅಟ್ಟದ ಮೇಲೆ ವಾರಕ್ಕೆ ಇಪ್ಪತ್ತೈದು ರೂಪಾಯಿಗಳ ಬಾಡಿಗೆ ಗೊತ್ತುಮಾಡಿ ತಮ್ಮ ಗಂಟು ಗದಡಿಗಳನ್ನು ಅಲ್ಲಿಟ್ಟು ಪೇಟೆಗೆ ಹೋಗಿಬರುವದಾಗಿ ಹೇಳಿ ಹೋದರು.

ಒಂದೆರಡು ಕೀಲಿಯ ಜೋಡುಗಳು, ಹಣಿಗೆ, ಕನ್ನಡಿ, ಎರಡು ಸೂಟುಕೇಸುಗಳು, ಎರಡು ಮೂರು ತರದ ಸುವಾಸಿಕ ಕೇಶತೈಲ-ಸೆಂಟ್ಸುಗಳು, ಸಿಲ್ಕಿನ ಅರ್ಧ ಡಝನ ಕರವಸ್ತ್ರಗಳು, ಕ್ಲಿಪ್ಪು-ಪಿನ್ನು, ತರುಣಿಯ ಕೈಗೊಂದೊಂದು ಪೌನಿನ ಬಳೆ, ಒಂದು ಇಮಿಟೇಶನ್ ಉಂಗುರ, ರೇಶಿಮೆಯ ನಾಜೂಕಾದ ಇಮಿಟೇಶನ್ ಜರತಾರೀ ಪತ್ತಲಗಳು, ನಾಲ್ಕಾರು ಫ್ಯಾಶನೇಬಲ್ ಬ್ಲಾವುಜುಗಳು, ತರುಣನಿಗೆ ಒಂದೆರಡು ಸೂಟು, ಒಂದು ಇಮಿಟೇಶನ್ ಹರಳಿನ ಉಂಗುರ, ವ್ಯಾಸಲಾಯಿನ್, ಸ್ನೋ- ಇನ್ನೂ ಏನೇನೊ ಮೋಜಿನ ವಸ್ತುಗಳನ್ನು ಕೊಂಡರು. ಅಟ್ಟಕ್ಕೆ ಬಂದು ಇಬ್ಬರೂ ಡ್ರೆಸ್‌ಮಾಡಿಕೊಂಡು, ಕನ್ನಡಿಯಲ್ಲಿ ನೋಡಿಕೊಂಡರು. ಕಾಲುಗಳು ಬರಿಯವಿರುವವೆಂದು ಗೊತ್ತಾಯಿತು. ಮೊಚ್ಚೆಗಾರರ ಅಂಗಡಿಗಳನ್ನೆಲ್ಲಾ ತಿರುಗಿದ್ದಾಯಿತು. ಇಬ್ಬರೂ ಕನ್ನಡ ಮೂರು ನಾಲ್ಕು ಇಯತ್ತೆಯವರೆಗೆ ಎಂದೋ ಶಾಲೆ ಕಲಿತು, ಚಿಕ್ಕಂದಿನಲ್ಲಿಯೆ ಶಾಲೆ ಬಿಟ್ಟು ಬರಿಯ ಹುಂಬ ಜನರಲ್ಲಿಯೆ ಜನ್ಮ ಕಳೆದವರು.

ಎಂದ ಮೇಲೆ ಹೈಸ್ಕೂಲು-ಕಾಲೇಜುಗಳ ಮೆಟ್ಟಲು ಹತ್ತಿದ ಹುಡುಗರಂತೆ ಅಪ್-ಟು-ಡೇಟ್ ಫ್ಯಾಶನ್ನು ಮಾಡಲಿಕ್ಕೆ ಅವರಿಗೆ ಹೇಗೆ ತಾನೇ ಬರಬೇಕು ? ಕಂಡದ್ದೆಲ್ಲವೂ ಅವರಿಗೆ ಫ್ಯಾಶನೇಬಲ್ಲಾಗಿಯೇ ಕಂಡಿತು. ನಿಜವಾಗಿ ನೋಡಿದರೆ, ಈಗಿನ ದಿನಮಾನಕ್ಕೆ, ಚಪ್ಪಲಿಗಳು ಒಳ್ಳೆಯ ಸುಧಾರಕರೆನಿಸಿಕೊಳ್ಳುವವರಿಗೆ ಸಹ ಚಂದವಾಗಿ ಕಾಣುವಂತಹವು. ಆದರೆ ನಮ್ಮ ತರುಣಯುಗಲಕ್ಕೆ ಬೂಟುಗಳನ್ನು ಕೊಳ್ಳಬೇಕೆನಿಸಿತು. ಇಬ್ಬರೂ ಒಂದೊಂದು ರೂಪಾಯಿಯ ಟೇನಿಸ್ ಬೂಟುಗಳನ್ನು ಕೊಂಡುಕೊಂಡು ಮೆಟ್ಟಿದರು. ನಾಲ್ಕೈದು ದಿನಗಳ ವರೆಗೆ ಬಲು ಸೊಗಸಿನಿಂದ ಕಾಲ ಕಳೆದರು. ಫರ್ಸ್ಟಕ್ಲಾಸಿನಲ್ಲಿ ಸಿನೇಮಾ ನಾಟಕಗಳನ್ನು ನೋಡುತ್ತ, ಉಪಹಾರ ಗೃಹ, ಟ್ರಾಮು, ಸಮುದ್ರದ ದಂಡೆ, ಬ್ಯಾಕಬೇ, ಶಾಲೆಕಾಲೇಜು, ಹಾಸ್ಟೆಲ್ಸು, ಉಪವನಗಳು, ಎಲ್ಲೆಲ್ಲಿಯೂ ಮುಂಬಯಿಯಲ್ಲಿ ಸುತ್ತಾಡಿ, ಚಕ್ಕಂದದಿಂದ ಚಲ್ಲಾಟವಾಡಿದರು.

ಮುಂಬಯಿಗೆ ಬಂದು ಅಂದು ಐದನೆಯ ದಿನವಿದ್ದಿತು. ಮಟಮಟ ಮಧ್ಯಾಹ್ನ, ಹೊರಗೆಲ್ಲ ರಣರಣ ಬಿಸಿಲು ಸುರಿಯುತ್ತಿದೆ. ತರುಣರಿಬ್ಬರೂ ತಮ್ಮ ಅಟ್ಟದ ಮೇಲಿನ ಕೋಣೆಯೊಳಗೆ ಬಾಗಿಲಿಕ್ಕಿಕೊಂಡು, ಹಗಲುಹೊತ್ತಿದ್ದರೂ ವಿದ್ಯುದ್ದೀಪಗಳನ್ನು ಹಚ್ಚಿಕೊಂಡು, —ಅವರಿಗೆ ವಿದ್ಯುದ್ದೀಪವೂ ವಿಚಿತ್ರವೆನಿಸಿ, ಅದೂ ಒಂದು ಫ್ಯಾಶನ್ನಾಗಿತ್ತು—ವಿದ್ಯುದ್ವೀಸಣಿಕೆಗಳನ್ನು ಬೀಸಿಕೊಂಡು, ಹರಟೆಕೊಚ್ಚುತ್ತ ನಗೆಯಾಟವಾಡುತ್ತ ಕುಳಿತಿದ್ದರು. ಮುಂದಿನ ತಮ್ಮೀರ್ವರ ಸುಖ-ದುಃಖದ ಬಗೆಗೂ ಎಷ್ಟೋ ಮಾತುಕತೆಗಳಾದವು. ಮಾತಾಡುತ್ತ ಮಾತಾಡುತ್ತ ತಮ್ಮ ಹತ್ತಿರವಿದ್ದ ಹಣವು ತೀರಿದ ಬಳಿಕ ಮುಂದೇನು ಮಾಡುವದೆಂದು ಯೋಚಿಸತೊಡಗಿದರು.

" ಊರಿಗೆ ಹ್ವಾದ ಬಳಿಕ ಹ್ಯಾಂಗಾರ ಮಾಡಿ ನಿನ್ನ ಮದಿವ್ಯಾಗೇ ಬಿಡತೇನಿ ನೋಡು........ "

ಯಾರೋ ಬಾಗಿಲು ತಟ್ಟಿದರು; ಎದ್ದು ಬಾಗಿಲು ತೆರೆದನು. ನಾಲ್ಕು ಜನ ಪೋಲೀಸರು ನಿಂತಿದ್ದಾರೆ; ಹುಡುಗರು ಹೆದರಿದರು. ಅಷ್ಟುಹೊತ್ತಿನ ವರೆಗೆ ಕಟ್ಟಿದ್ದ ತಮ್ಮ ಸುಖದ ಗಾಳಿಗೋಪುರವು ಗಾಳಿಗೋಪುರವೇ ಆಗಿ, ಗಾಳಿಯೊಡನೆ ಹಾರಿಹೋಗಿ ಹುಡಿಗೂಡುವ ಹೊತ್ತು ಬಂದಿತಲ್ಲವೆಂದು ಗಾಸಿಯಾದರು.

ಪೋಲಿಸರು ಅವರ ಹೆಸರನ್ನು ಬರೆದುಕೊಂಡು, ಅವರಿಬ್ಬರ ಜವಾಬು ತೆಗೆದುಕೊಂಡರು. ನಾಕಷ್ಟು ನಿಜ ಸುದ್ದಿಯು ತರುಣರಿಂದ ಅವರಿಗೆ ಸಿಕ್ಕಿತು. ಹೊಡೆತ-ಬಡಿತಗಳಿಲ್ಲದೆ ಹುಡುಗರು ಒಳ್ಳೆಯ ರೀತಿಯಿಂದ ನಿಜವಾದ ಸಂಗತಿಯನ್ನು ಮೊದಲುಕೊನೆಯಾಗಿ ಹೇಳಿದ ಬಳಿಕ, ಪೋಲಿಸರು ಸಾಮಾನಿನೊಡನೆ ಅವರನ್ನು ರೈಲು ಹತ್ತಿಸಿ ಬೆಳಗಾಂವಿಗೆ ಅಟ್ಟಿದರು. ಅವರ ಜೊತೆಗೆ ಪೋಲಿಸರಿಬ್ಬರು ಬಂದೇ ಬಿಟ್ಟರು, ಬೆಂಗಾವಲಾಗಿ. ಮರುದಿವಸ ಬೆಳಗಾಂವಿಗೆ ರೈಲು ಬಂದೊಡನೆ, ಅವರನ್ನು ಪೋಲಿಸರು ನಮ್ಮೂರ ಪೋಲೀಸ್ ಸ್ಟೇಶನ್ನಿಗೆ ತಂದು ಲಾಕಪ್ಪಿನಲ್ಲಿಟ್ಟರು.

ಇಬ್ಬರ ಮುಖವೂ ಗಾಬರಿಯಿಂದ ಬಾಡಿದಂತಾಗಿತ್ತು. ತರುಣಿಯಂತೂ ಒಳ್ಳೆಯ ಗಾಬರಿಯಿಂದ, ಮುಂದೇನು ಗತಿಯೆಂಬರ್ಥದ ದೃಷ್ಟಿಯಿಂದ ತರುಣನ ಕಡೆಗೆ ನೋಡಲು, ತರುಣ ಪಿಸುಕ್ಕನೆ ನಕ್ಕು, ಕಣ್ಣು ಹುಬ್ಬು ಹಾರಿಸುತ್ತಿದ್ದನು; ಮೆಲ್ಲಗೆ ಸಿಳ್ಳುಹಾಕಿ, "ಮಡಮ್ ಸಾಬ ಸಲಾಮ್ರಿ." ಎನ್ನುತ್ತ ನಗುವನು. ಹುಡುಗಿಯು ಇದರಿಂದ ಇನ್ನಿಷ್ಟು ರೇಗಿದಂತಾಗಿ, ಕಣ್ಣೀರು ಸುರಿಸಹತ್ತಿದಳೆಂದರೆ, " ಬಿಡು ಬಿಡು ಅಳತೀದ್ಯಾಕ! ನಮಗ ಮುಂದ ಮದಿವ್ಯಾಗಾಕ ಬೇಕಾತೇಳು. ನಾಕ ಮಂದಿಗೆ ಗೊತ್ತಾಗಲಿ ಹೀಂಗರ, ನಾನೂ ನೀನೂ ಒಂದ್ಮನಸಿ ನಾವರದೇವಂತ " ಎಂದು ಮರುಕ್ಷಣವೇ ಸಮಾಧಾನ ಹೇಳಬೇಕು

* * *

ಇತ್ತ ಷಷ್ಠಿಯ ದಿವಸ ಮುಂಜಾನೆ ಎಂಟು ಗಂಟೆಗೆನೇ ಎಲ್ಲಮ್ಮನ ಗುಡ್ಡದಲ್ಲಿ, ಓಲೇಕಾರ ಭೀಮಣ್ಣನು ದ್ಯಾಂವಕ್ಕನಿಗೆ ಹಠಾತ್ತಾಗಿ ಭೆಟ್ಟಿಯಾದನು.

"ಏನಪಾ ಎಂಣಾ, ಊರ ಕಡೆ ಎಲ್ಲಾ ಸುಕಾನ? ದೇವಿಗೆ ಬಂದ್ಯಾ? ಅಲ್ಲಪಾ, ನನ್ ಮಗಾ ಎಲ್ಲ್ಯಾರ ನಿನಗ ಕೂಡಿದ್ನೋ ಹ್ಯಾಂಗ? ಅವನೂ ಪಾಡದಾನ? "

" ದ್ಯಾಂವಕ್ಕಾ, ನಾ ಗುಡ್ಡಕ ಬಂದದ್ದು ದೇವೀ ಜಾತ್ರಿಗೂ ಅಲ್ಲಾ, ದರ್ಸಣಕ್ಕೂ ಅಲ್ಲಾ. ಆ ನಿನ್ನ ಮಗನ ಸುದ್ದೀನ ಹೇಳಾಕ ಪುರಮಾಶೇ ಬಂದೇನಿ. "

" ಅಯ್ಯs, ಅದೇನಪಾ ಸುದ್ದೀ ನನ್ ಮಗಂದೂ? ಏನಾಗೇ-ಹೋಕ್ಯ ಎಣ್ಣಾ ನನ್ನ ಮಗ್ಗ? "

" ದ್ಯಾಂವಕ್ಕಾ, ಸ್ವಲ್ಪ ನಿದಾನದಿಂದ ಕೇಳು. ನಿನ್ ಮಗಾ ಆ ಸೆರೆಬಡಕ ಗಾಂಜಿಬಡಕ ಸೂಳೀಮಗಾ ಗಡ್ಯಾ ಅದಾನಲ್ಲಾ—ಆ ಗಡ್ಯಾನ ಹೇಣ್ತಿಲ್ಲ........"

" ಯಾರು ದುರ್ಸತಿ? ಆಕೀ ಸಂಗಾಟ-ಆಕೀ ಗಂಡನ ಸಂಗಾಟ ಏನ್ ನ್ಯಾಯಾ-ಗೀಯಾ ಹೂಡ್ಯಾನೇನ್ಮತ್ತ? "

" ಛೀ ನಮ್ಮವ್ವಾ. ಅಟ ಕೇಳ್ಯಾರ ಕೇಳವಲ್ಲಿ. ಆ ದುರ್ಸತಿನ್ನ ಓಡಿಸಿಗೊಂಡಕ್ಯಾರಾ ಹೋಗ್ಯಾನಂತ, ಹುಣ್ಣಿವಿ ದಿನಾನs ರಾತರ‍್ಯಾಗ ಮುಂಬಯಿಗೆ."

" ಅಟ್ಟ, ರೊಕ್ಕೆಲ್ಲಿಂದ ಬರ್ತಾವೋ, ಎಣ್ಣಾ ನಂನ್ ಮಗನ ಹಂತ್ಯಾಕ? ಹುಣ್ಣಿವಿ ದಿನಾ ನಾನ ಇಲ್ಲಿಂದ ಹೋಗುವಾಗ ಜುಕ್ಕಾನ ಜುಲಮೀಲೆ ನಾಕಾರ್ ರೂಪಾಯಿ ಕೊಟ್ಟ ಕಳಸೇನಿ. "

" ನಾಕಾರ್ ಯಾಕವ್ವಾ? ಮನ್ಯಾಗಿನ ನಿನ್ನ ವಂಕೀ ಜೋಡೂ ಸರಗೀನೂ ಒಯ್ದಾನಂತ; ಎಷ್ಟೋ ರೂಪಾಯಿನೂ ಒಯ್ದಾನಂತ.

ಅಕೀನೂ ಒಂದ ಮೂಗತಿ ತಂದೀದ್ಲಂತ. ಎಲ್ಲಾನು ಅಲ್ಲೀ ಕೈಗೆ ಬಂದ್ಹಾಂಗ ಮಾರಿ ನಾಕ್ಕೈದ್ದಿನಾ ಚಲ್ಲಾಟ ಆಡ್ಯಾವ. ಇತ್ಲಾಗ ಗಡ್ಯಾನೂ ಅವನ ತಾಯಿನೂ ಪೋಲಿಸರಿಗೆ ವರದೀ ಕೊಟ್ರಂತ. ಇಂದ ಮುಂಜಾನೆ ಅವರಿಬ್ಬರ್ನೂ ಮುಂಬಯಿಯಿಂದ ಊರಿಗೆ ಹಿಡಕೊಂಡು ಬಂದು ಪೋಲಿಸಕಚೇರ್ಯಾಗಿಟ್ಟಾರ. ಗಡಾ ನಡಿ ನೀ ಊರಿಗೆ."

ದಾಂವಕ್ಕ ಹಣೆಹಣೆ ಗಟ್ಟಿಸಿಕೊಂಡಳು—ಅತ್ತಳು—ಕರೆದಳು. ಯಾರಿಗಾಗಿ ತನ್ನ ಇಡೀ ಜನ್ಮ ಕಷ್ಟಪಟ್ಟಳೋ, ಯಾರಿಗಾಗಿ ಸಾವಿರ ಗಟ್ಟಲೆ ದುಡ್ಡನ್ನು ಸಂಗ್ರಹಿಸಿಟ್ಟಿದ್ದಳೊ, ಆ ಮಗನೇ ತನ್ನ ಕೈಲಿ ತಾನು ಹಾಳುಮಾಡಿಕೊಂಡಿನಲ್ಲ; ತನ್ನ ಕಾಲಮೇಲೆ ತಾನು ಕಲ್ಲು ಹಾಕಿ ಕೊಂಡದ್ದಲ್ಲದೆ, ಚಾವಡಿಯ ಕಟ್ಟೆಯನ್ನೇರಿ, ತನಗೂ ಕಚೇರಿಗೆ ಹೋಗುವ ಮಾನಹಾನಿಯ ಹೊತ್ತನ್ನು ತಂದನಲ್ಲ—ಎಂದು ಅವಳಿಗೆ ಬಹಳ ಕಷ್ಟವಾಯಿತು. ಎಷ್ಟೆಷ್ಟೋ ಬೋರಾಡಿದಳು. ತನ್ನ ಹೊಟ್ಟೆಯಲ್ಲಿದ್ದಿದ್ದ ಕಿಚ್ಚನ್ನೆಲ್ಲ ಭೀಮಣ್ಣನ ಮುಂದೆ ತೋಡಿ ಕೊಂಡಳು.

ಆಗ ಭೀಮಣ್ಣನು "ದ್ಯಾಂವಕ್ಕಾ, ಕಳಕೊಂಡು ಹುಡುಕಿದ್ರ ಎಲ್ಲಿಂದ ಬರ್ತೈತಿ? ಈಗ ಗಡಾ ಊರಿಗೆ ನಡಿ. ಆ ನೀಚ ಗಡ್ಯಾ ಮದ್ಲs ಹುಡುಗಿನ್ನ ಹೊಡಹೊಡ್ದ ದಿನಾ ಅದರ ಹೆಣಾ ಮಡಚಿ ಹಾಕತಿದ್ನ. ಈಗನಕಾ ನಿನ್ನ ಮಗನ ಸಂಗಾಟ ಹ್ವಾದದ್ದನಕಾ ಅವನ ಹೊಟ್ಟ್ಯಾಗ ಬೆಂಕೀನ ಸುರುವಿದ್ಹಾಂಗಾಗೇತಿ. ಅವರಿಬ್ಬರ್ನ ಸಾದಿಸಿದ್ರ ನಿನ್ನ ಸುದಕಾ ಬಂದೀಕಾನೆ ಕಾಣಿಸಿ, ತಗಣೀ ರೊಟ್ಟೆ ತಿನ್ನಾಕ ಹಚ್ಚತೇನಂತ ಊರಾಗೆಲ್ಲಾ ಮಿಶೀ ಮ್ಯಾಲೆ ಕೈ ಎಳಕೊಂತ ಹಲ್ ಮಶಾಕ್ಹತ್ಯಾನ. ನಿನ್ನ ಬಂಗಾರ ಹ್ವಾದದ್ದು ಹೋಗವಲ್ದ್ಯಾಕ, ನಿನ್ ಮಗನ ಮಾರೀ ನೋಡೇಳು."

ಮೊದಲೇ ದ್ಯಾಂವಕ್ಕ ವಿಚಾರವಂತಳು; ಎಲ್ಲವನ್ನೂ ಕೇಳಿ ಕೊಂಡು ಕೆಲಹೊತ್ತು ಸುಮ್ಮನಿದ್ದಳು.

" ಹೊಂ, ಹೀಂಗ ಬ್ಯಾರೀ ಐತೇನ ? ಆ ಗಾಂಜಿಬಡಕ ಮೂಳಾ ಪಣಾ ಬ್ಯಾರೆ ತೊಟ್ಟಿತೇ, ನಮ್ ತಾಯಿಮಕ್ಕಳಿಗೆ ಬಂದೀಕಾನೆ ಕಾಣಸ್ಬೇಕಂತ? ಆಗಲಿ, ಹೀಂಗ ಜರ ಇದ್ದದ್ದs ಕರೇವಿದ್ರ ನಾನೂ ದೇವೀ ಮುಂದ ನಿಂತs ಪಂತಾ ಕಟ್ತೇನಿ—ನನ್ನ ಮಗಾ, ನಾನೂ ತಗಣೀ ರೊಟ್ಟೀ ತಿನ್ನೂದು ಮರೀ ಅನ್ನ ಅಂವಗ. ಆದನಕಾ ಒತ್ತುಟ್ಟಿಗಿರ್ಲಿ. ಆ ಹುಡಿಗಿನ್ ಸಂಕಾ ಜೇಲಿನ ಹೊಚ್ಚಲಾ ಮೆಟ್ಟಗೊಡಾಕಿಲ್ಲಾ. ಹಿಂತಾಕೀ ಮಗನದಶೀಂದ ಹೀಂಗ ಹೋತ ಆ ಹುಡುಗೀ ಅಂತ, ಮಂದೀ ಕಡಶೀಂದ ಅನಗೊಡಾಕಿಲ್ಲ, ತಿಳೀತಿಲ್ಲೋ? ಹಂತಾ ಪರಸಂಗ ಬಿದ್ರ, ನನ್ನ ದುಡ್ಡೂ ಹೋಗಲಿ, ದುಗ್ಗಾಣೀನೂ ಹೋಗ್ಲಿ, ನನ್ನ ಹೊಲಾ ಹೋಗ್ಲಿ, ಮನಿ ಹೋಗ್ಲಿ, ನನ್ನ ಇದ್ದ ಬಿದ್ದದ್ದೆಲ್ಲಾನೂ ಹೋಗ್ಲಿ. ಆಕೀ ದಶಿಂದ ನನ್ ಮಗನ ಜೀವಾ ಹರೀತಿದ್ರ, ಆಕಿನ್ನ ಆ ಯಮುನ ದವಡ್ಯಾಗಿಂದ ಬಿಡಿಸಿಕ್ಯಾರಾ ತಂದು, ನನ್ ಮಗನ ಸಂಗಾಟ ಲಗಣಾ ಮಾಡಿ, ನನ್ನ ಮನ್ಯಾಗ ತಂದಿಟಗೊಂತೇನಿ.—ಎಲ್ಲಾನೂ ಹೋಗಲಿ ನನ್ನ ಮಗನ ಮ್ಯಾಗಿಂದ ನಿವಾಳಿಸಿ! ದೇವಿ ಸತ್ತುಳ್ಳಾಕಿ ಆಗಿದ್ರ ತೋರಸ್ಲಿ ಎಲ್ಲಾನೂ ನಾಕ ಮುಂದಿಗೆ! "

ಚಟ್ಟನೆದ್ದು ಗಂಟು ಕಟ್ಟಿಕೊಂಡು, ತಮ್ಮನನ್ನೂ ಭೀಮಣ್ಣನನ್ನೂ ಕರಕೊಂಡು ಹೊರಟುಬಿಟ್ಟಳು. ಮಧ್ಯಾನಕ್ಕೆ ಊರಿಗೆ ಬಂದವರು ನೇರವಾಗಿ ಪೋಲೀಸ ಕಚೇರಿಗೆನೇ ಹೋದರು. ತರುಣ-ತರುಣಿಯರಿಬ್ಬರನ್ನೂ ಹೊರಗೆ ಕುಳ್ಳಿರಿಸಿ ಅವರ ಜವಾಬು ತೆಗೆದು ಕೊಳ್ಳುತ್ತಿದ್ದರು.

ಭೀಮಣ್ಣನು ಮೆಲ್ಲಗೆ, " ದ್ಯಾಂವಕ್ಕಾ, ಅಟ ಮುಂದಕ್ಕ ಬಂದು ನೋಡಬಾರ್ದ ನಿನ್ನ ಮಗನ್ನs, ದುರ್ಪತಿನ್ನs ಹ್ಯಾ....ಹ್ಯಾ....ಹ್ಯಾಂಗ ಸಾಬಾ-ಮಡ್ಡ ಮ್ಯಾಗ್ಯಾರ! ಮುಂಬೈಗೆ ಹೋಗಿ ಆಗ್ಯಾರ ಮುಂಬೈಗೆ! " ಎಂದನು.

ದ್ಯಾಂವಕ್ಕ ಹೀಗೆ ಹಣಿಕಿ ಹಾಕಿದಳು. "ಅಯ್ಯ ನನ್ನ ಶಿವಣ! ಏನ ಆಕಾರಾಗ್ಯಾವ, ಏನ ಸಂಗಮಂಗನ್ಹಾಂಗ ದಿರೇಸ ಮಾಡಿ ಕೊಂಡಾವ, ನೋಡಿದ್ಯಾ! ನನ್ ಚಿನ್ನಾನೆಲ್ಲಾ ಒಯ್ದು ಇದಕs ಬಡೆದಿದ್ದಾನೇನೋಪಾ! ಹೊಟ್ಟೀಲಿ ಹುಟ್ಟಿದ್ದೊಂದು; ಬೆನ್ನೀಲೆ ಬಿದ್ದದ್ದೊಂದು ಬಾಗಾದೆಂತಾರದೇನ ಸುಳ್ಳಲ್ಲ ನೋಡು! ...." ಅಳಹತ್ತಿದಳು. ಮಗನ ಮುಖವನ್ನು ನೋಡಿದಳು ತನ್ನ ಚಿನ್ನದಾಭರಣಗಳ ಹಾನಿಯನ್ನು ಮರೆತಳು. ಹೊಸ ಉಡುಪಿನಲ್ಲಿ ಅವನು ಆಕೆಗೆ ಬಲು ಚೆಂದ ಕಂಡನು. ದ್ರೌಪದಿಯೂ ಚೆಂದ ಕಂಡಳು.

ಅತ್ತಿತ್ತ ನೋಡಿದಳು. ಒಬ್ಬ ಪೋಲೀಸನನ್ನು ಕರೆದು "ಯಪ್ಪಾ ನಿಮ್ಮ ಕಾಲಿಗೆ ಬೀಳ್ತೇನಿ, ನನ್ನ ಮಗನ್ನಟ ಹ್ಯಾಂಗಾರ ಮಾಡಿ ಉಳಸರಿ ನನ್ ತಂದೆ...." ಕೊರಳೊಳಗಿನ ಸರದಾಳೀ ಸಾಮಾನನ್ನು ತೆಗೆದು ಅವನ ಕೈಗೆ ಕೊಟ್ಟಳು. "ಕೋರ್ಟ ಖರ್ಚಿಗೆ ಇರ್ಲಿ ನನ್ನಪ್ಪಾ; ಇಕಾ ಹಿಡಿ. ಹ್ಯಾಂಗಾರ ಮಾಡು, ನನ್ನ ಮಗನ ಬಿಡ್ಸು" ಎಂದು ಪುನಃ ಅಳಹತ್ತಿದಳು.

'ಅಂತಹ ಮಗನಿಗೆ ಶಿಕ್ಷೆಯಾದರೇ ಒಳಿತಲ್ಲವೇ?' ಎಂದು ಅವರು ಕೇಳಿದರು. ಅವಳು ಅತ್ತಳು; ಕಾಲಿಗೆರಗಿ ಬೇಡಿಕೊಂಡಳು. ಹಣವು ಕೋರ್ಟ ಖರ್ಚಿಗೆ ಹೋಯಿತು. ಆಕೆಯ ಮಗನನ್ನು ಬಿಟ್ಟರು; ಹುಡುಗಿಯನ್ನೂ ಬಿಡಿಸಿದಳು.

ದ್ರೌಪದಿಯು ತನ್ನನ್ನು ತನ್ನ ಗಂಡ ಕಾಡುವನೆಂತಲೂ ಅವನ ಜೊತೆಗೆ ಬಾಳ್ವೆಮಾಡಲು ತನಗೆ ಮನಸಿಲ್ಲವೆಂತಲೂ ಜವಾಬು ಕೊಟ್ಟಳು. ಸೋಡಪತ್ರವನ್ನು ಕೊಡಿಸಿರೆಂದು ಸರಕಾರಕ್ಕೆ ಮೊರೆಹೋಗಿ ಬೇಡಿಕೊಂಡಳು. ಆಕೆಯ ಗಂಡ, ಅತ್ತೆ ಅಲ್ಲಿಯೇ ಇದ್ದರು. "ಮದುವೆಯ ಖರ್ಚು ನಗದು ಸಾವಿರ ರೂಪಾಯಿ ಕೊಟ್ಟು, ತಾಳಿಯನ್ನು ಕೊಡಲಿ; ಎಂದರೆ ಪುನಃಪುನಃ ನ್ಯಾಯ ಹೂಡುವದನ್ನು ಬಿಡುವೆವು" ಅಂದರು.

“ ಲೇ ದ್ಯಾಂವೀ, ನಿನ್ನ ಕೂನ ಮಾಡ್ತೇನ್ನಿಂದ್ರು ” ಎಂದು ಹತ್ತಿರ ಬಂದು ಹಲ್ಲು ಕಡಿಕಡಿದು ದ್ರೌಪದಿಯ ಗಂಡ ಗೊಣಗುಟ್ಟ-ಹತ್ತಿದ.

ದ್ಯಾಂವಕ್ಕನೂ ಜಿದ್ದಿಗೆ ಬಿದ್ದಳು. ಆವಳೂ ಮೆಲ್ಲಗೆ “ ಗಂಡ್ಸನ ನಿನ್ನ ಧೀರೇವರ ನೋಡ್ತೇನಿ; ಇಲ್ಲಾರ ನನ್ನ ಅನಾತ ಬಡವೀ ಧೀರೇನರ ಪರೀಗ್ಗ್ಯಚ್ಚು ! ” ಎಂದವಳೇ ಕಚೇರಿ ಬಿಟ್ಟು, ಮಗನನ್ನು ಕಣ್ಸನ್ನೆಯಿಂದ ಕರಕೊಂಡು ಹೊರಗೆ ಬಂದಳು.

ನಾಲ್ಕಾರು ನಿಮಿಷ ಮಗನೊಡನೆ ಏನೇನೋ ಮಾತನಾಡಿ-ಕೊಂಡು ಒಳಗೆ ಬಂದಳು. “ ಯಪ್ಪಾ, ಅಂವನ ಮದಿವೀ ರೂಪಾಯಿ-ನಟ ಹೇಳಿಬಿಡ್ರಿ. ನಂಗ ಗೊತ್ತೈತ್ರಿ, ಆರಿಪತ್ತ ರೂಪಾಯ್ದಾಗ ಮದವೀ ಮಾಡಿಕೋಂಡಾನ್ರಿ; ಸಾವಿರ ರೂಪಾಯಂತಾನಲ್ರಿ ಎಪನಾರ, ಹಿಂತಾ ಬಡವಾ, ಸೆರೆಬಡಕ ಮೂಳಾ, ಸಾವಿರ ರೂಪಾಯಾ ಎಲ್ಲಿಂದ ತಂದಿದ್ದಾನು ? ಆಟ ಇಚಾರ ಆಗಲ್ರೀ ದಣ್ಯಾರ-ತಮ್ಮ ಪಾದಕ ಬೀಳತೇನ್ರಿ. ”

ಆಕೆಯ ಮಾತಿಗೆ ಎಲ್ಲ ಅಮಲ್ದಾರರೂ ದಂಗು ಬಡೆದು ಹೋದರು. ನ್ಯಾಯಮೂರ್ತಿಗಳಂತೂ “ ಅವ್ವಾ, ನೀನೇ ನನ್ನ ಜಾಗಾದಲ್ಲಿದ್ದರೆ ಒಳಿತಾಗುತ್ತಿತ್ತು ನೋಡು. ಎಷ್ಟು ನಿನ್ನ ಧೈರ್ಯ-ಎಷ್ಟು ನಿನ್ನ ವಿಚಾರ ತಾಯಿ ! ” ಎಂದರು.

ಇಷ್ಟರಿಂದಲೇ ದ್ಯಾಂವಕ್ಕನಿಗೊಳ್ಳೆಯ ಅಭಿಮಾನವುಂಟಾಯಿತು

“ ಆವಳ ಸೋಡಪತ್ರವಾಗಬೇಕಾದರೆ ಬೇಕಾಗುವ ಹಣವನ್ನು ನೀನೇಕೆ ಕೊಡುತ್ತೀಯವ್ವಾ ? ” ಪೋಲೀಸ ಕ್ರಾಸಾಯಿತು.

“ ನನ್ನ ಮಗನ ಸಂಗಾಟ ಲಗಣಾಮಾಡಿಕೊಂತಾಳಂತ್ರಿ. ಹೀಂಗ ಬಿಟ್ರ, ಪರದೇಶಿ ಹುಡಿಗಿ ಅಡ್ನಾಡಿ ಆಗಿ ಹೊಕ್ಕೈತಿ; ಯಡ್ಡೂ ಮತ್ತೂ ಮತ್ತೂ ಓಡಿ ಓಡಿ ಹೋಗೂವ. ಅದರಕಿಂತಾ ಮದವೀಮಾಡಿ ಮನ್ಯಾಗಿಟಗೊಂಡದ್ದ ಸುಕಾ ಅಲ್ರೀ ಯಪ್ಪಾ ? ”

ಎರಡುನೂರು ರೂಪಾಯಿಗಳ ಮೇಲೆ ಸೋಡಪತ್ರವಾಗಿ ಹೋಯಿತು.

ಮರುವಾರವೇ ದ್ಯಾಂವಕ್ಕನ ಮಗನಾದ ಸಾದೇವನ ಮದುವೆ ದ್ರೌಪದಿಯ ಕೂಡ-ಒಂದಿತ್ತು, ಒಂದಿಲ್ಲವಾಗಿ-ಆಗಿಹೋಯಿತು.

ಇದೆಲ್ಲ ಸುದ್ದಿಯು ಹರಕು-ಮುರಕಾಗಿ ಜನರ ಬಾಯಿಂದ ನಮಗೆ ತಿಳಿದಿತ್ತು. ಮದುವೆಯಾದ ನಾಲ್ಕಾರು ದಿನಗಳಲ್ಲಿ ದ್ಯಾಂವಕ್ಕನು ಕಡ್ಲೀಗಿಡದ ಹೆಡಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು, ಕಿತ್ತಳೀ ಹಣ್ಣಿನ ಬುಟ್ಟಿಯೊಂದನ್ನು ಟೊಂಕದ ಮೇಲಿಟ್ಟುಕೊಂಡು, ಮಲ್ಲಿಗೆ ಹೂವಿನ ತಟ್ಟಿಯೊಂದನ್ನು ಹೊತ್ತಿರುವ ಒಬ್ಬ ತರುಣಿಯನ್ನು ಬೆನ್ನಿಗೆ ಹಚ್ಚಿಕೊಂಡು ಬಂದು “ ಬಾಯಾರ ” ಎಂದಳು.

ಅವಳ ಸುದ್ದಿಯನ್ನು ಅವಳ ಬಾಯಿಯಿಂದ ತಿಳಿದುಕೊಳ್ಳ ಬೇಕೆಂಬ ಲವಲವಿಕೆಯು ಮೊದಲೇ ನನಗಿತ್ತು. ಅವಳ ಧ್ವನಿಯನ್ನು ಕೇಳಿದ ಕೂಡಲೆ ಒಂದೇ ಜಿಗಿತಕ್ಕೆ ಹೊರಗೆ ಬಂದೆ.

ಅವಳ ಆಗಿನ ಒಣಗಿದ ಮುಖವನ್ನೂ ಕೆದರಿದ ತಲೆಯನ್ನೂ ಅತ್ತತ್ತು ಬಾಡಿ ಬಾತಿದ್ದ ಕಣ್ಣುಗಳನ್ನೂ ಉಟ್ಟ ಹರಕು ಸೀರೆಯನ್ನೂ ತೊಟ್ಟ ಚಿಂದೀ ಕುಪ್ಪಸವನ್ನೂ ನೋಡಿ, ನನಗೆ ಕಳವಳವಾಯಿತು.

“ ಏನ್ ದ್ಯಾಂವಕ್ಕಾ, ಏನಿದು ನಿನ್ನಾಕಾರ? ಅರಿಷ್ಟಾದೇವಿ ಲಕ್ಷ್ಮಿನ್ನೋಡಿಸಿ ನಿನ್ನ ಮುಕ್ಕಾರಿ ಬಿಟ್ಲೇನು ? ”

“ ಅಯ್ಯೋ ಬಾಯಾರ— ” ಗೋಳೋ ಎಂದು ಮೊದಲು ಮನದಣಿ ಅತ್ತಳು. ಆ ಬಳಿಕ ಒಂದೂ ಬಿಡದಂತೆ ಎಲ್ಲವನ್ನೂ ಹೇಳಿ ‘ ನನಗೇನ ತುಸು ತ್ರಾಸಾತ್ರೆ ? ’ ಎಂದಳು.

“ ಅಲ್ಲವ್ವಾ, ಯಾವಾಕೀ ಸಲುವಾಗಿ ಇಷ್ಟೆಲ್ಲಾ ಕಷ್ಟಾತೂ, ಆಕಿನ್ನ ಮತ್ತ ಮನೀ ಸೊಸಿನ್ನ ಮಾಡಿಕೊಂಡ್ಯಲ್ಲಾ, ಇದ್ಯಾಂಗಾತು ? ”

“ಅಯ್ಯ ಬಾಯಾರ, ಮತ್ತೇನ ಮಾಡ್ತೀರಿ? ದಿನಬಂದಕ ಹಿಡ್ಕೊಂಡಿ ಹ್ವಾದ್ರ ಅವ್ರಕೂ ಸುಕಾ ಇಲ್ಲಾ, ನಂದಸಕಾ ಗೋಳ್ಯಾಸ ಮಾಡೇವಸ ಬಲ್ಲಾ. ಇಷ್ಟ್ ಮಾಡಿದ್ದಕ್ಕ ಸಾವಿರ ಮಂದಿ ಸಾವಿರ ಮಾತಾಡತಾರ್ರಿ. ಯಾರಂತಾರ, ಈ ಮುದಕಿಗೇನ ಮುದಿಹುಚ್ಚ ಹಿಡೀತು. ಮಗನ ಮಾತ ಕೇಳಿ, ಯಾವಾಕಿ ಪತಿಂದ ತಂಪಿಲ್ಲ ಹಾಕ್ಯಾತೂ ಆಕಿ ಕೂಡ ಅವನ ಮದವಿ ಮಾಡಿದ್ಲು. ಯಾರಂತಾರ, ಇಷ್ಟ ಹಣಾ ಕಳದಾನ, ಮತ್ತೂ ಅವನ್ನ ಮನ್ಯಾಗ ಸೇರಿಸಿಕೊಂಡಾಳ ಮದಿವಿ ಸೊಸಿಯಿದ್ದ ಈ ಮೂಳನ್ನ ಮನೀ ಸೇರಿಸಿಕೊಂಡಾಳ ಅಂತ ತಮ್ಮ, ತಮ್ಮನ ಹೇಣ್ತಿ, ದೈವದಾವ್ರು ಕೇಳಾಕ್ಹತ್ಯಾರ. ಅವನಾರs ನಾ ಕರೇವ ಹೇಳ್ರ್ಯಾ—ಈ ಜಲುಮದಾಗಂಕಾ ನಾ ಮದಿವಿ ಕಂಡಿಲ್ಲಾ. ಗಂಡ, ಗಂಡನ ಸುಕಾ, ಪಿರೀತಿ ಅಸ್ಕೀವ ಗೊತ್ತಿಲ್ಲಾ. ಹ್ವಾದ ಜಲುಮದಾಗಿನ ಪಾಪದ ಫಲಾ ಈ ಜಲ್ಮದಾಗ ಉಣ್ಣಾಕ್ಹತ್ತೇನಿ. ಯಾವಾಗ ಅವಂದೂ ಆಕೀದೂ ಪಿರೀತಿ ಕೂಡೇತಿ ಅಂದಬಳಿಕ, ಹಿಂತಾ ಯಾಳೇದಾಗ ನಾ ಆ ಹುಡಗೂರ್ನ ಅಗಲಿಸಿದ್ರ, ಮತ್ತ ಮುಂದಿನ ಜಲ್ಮಕ್ಕನೂ ಇದs ಎಡೀ ನನಗ ಬಂದೀತೋ ಬರಾಕಿಲ್ಲ್ಯೋ?”

“ಮತ್ತ ಮೊದಲಿನ ಸೊಸೀ ಗತಿಯೇನ ದ್ಯಾಂವಕ್ಕಾ?”

“ಆಕೀನೂ ಇರ್ಲಿ, ಈಕೀನೂ ಇರ್ಲಿ-ಅವರೂ ಎಲ್ಲಾರೂ ಮಡೀಲಿ, ನಾನೂ ನನ್ ಜಲಮಿರೂತಂಕಾ ಜೀವಾ ಹತೀಮಾಡಿ ಇವರ ಕಾಲಾಗ ನಾಕ ರೊಕ್ಕಾ ಮಾಡಾಕ ತಯಾರದೇನಿ. ಅಂವಗ ದೊಡ್ಡ ಹೇಣ್ತ್ಯಾದ್ಲೂ—ನನ್ ಕೈಯಾಗ ದುಡ್ಯಾಕ ಗಟ್ಟುಳ್ಳ ಸೊಸೀ ಆದ್ಲೂ. ಏನಂತೀರಿ ಬಾಯಾರ ಇದಕ ನೀವು?”

“ನಾ ಹೇಳ್ಲ್ಯಾ ದ್ಯಾಂವಕ್ಕಾ. ಬೇಖಾದ್ದವರು ನಿನಗೆ ಬೇಖಾದ್ಹಾಂಗ ಅನಕೋವಲ್ರ್ಯಾಕ—ನೀನು ನಿನ್ನ ಬಳಗಾ, ದೈವಾ, ಹಣಾ, ಗುಣಾ, ಮಾನಾ-ಮರ್ಯಾದೀ ಎಲ್ಲಾ ಒತ್ತಟ್ಟಿಗಿಟ್ಟು, ಅವರವರ ಪ್ರೀತಿ ಕೂಡಿದ್ದರ ಕಡೆ ಲಕ್ಷಕೊಟ್ಟು, ಲಗ್ನಾ ಮಾಡಿ ಅವರ ಜನಳ

ಕಲ್ಯಾಣ ಏನ ಮಾಡಿದೆಲ್ಲಾ, ಇದೊಂದು ಭಾಳ ಸಾಹಸದ ಕೆಲಸಾ ಮಾಡಿದಿ. ಈ ಮಾತಿನೊಳಗ ನಿನಗ ಶಾಹಬಾಸಕೀ ಕೊಡ್ತೇನ್ನೋಡು."

ಈ ವರುಷ ನಾನು ದ್ಯಾಂವಕ್ಕನನ್ನು ಮತ್ತೆ ನೋಡುತ್ತಿರುವದು ಆ ಮೊದಲಿನ ಅವಳ ಚಂಗಳಿಕೆವ್ವನ ರೂಪದಲ್ಲಿ. ಸಣ್ಣ ಸೊಸೆಯು ಇನ್ನೂ ಮನೆಗೆ ಬಂದಿಲ್ಲ. ಆದರೆ ದ್ರೌಪದಿಯು ಅತ್ತೆಗೆ ತಕ್ಕ ಸೊಸೆ-ಯಾಗಿ, ಅವಳ ಪಂಚಪ್ರಾಣವಾಗಿ, ಅವಳೊಡನೆ ಸರಿಗಟ್ಟಿಕೊಂಡು ದುಡಿಯುತ್ತ, ಗಂಡನೊಡನೆ ಬಲು ಪ್ರೀತಿಯಿಂದಿರುವಳಂತೆ. ಮದುವೆ ಯಾದ ಹೊಸತಾಗಿ ಸೊಸೆಯನ್ನು ಬೆನ್ನಿಗೆ ಹಚ್ಚಿಕೊಂಡು ನಮ್ಮಲ್ಲಿ ಬಂದಿದ್ದಳು ದ್ಯಾಂವಕ್ಕ.

ಆದರೀಗ ಅವಳನ್ನು ಸಣ್ಣ ಚಂಗಳಿಕೆವ್ವನನ್ನಾಗಿ ಮಾಡಿ ತನ್ನ ಮುಂದೆ ಹಾಕಿಕೊಂಡು, ಅವಳನ್ನು ಕಣ್ತುಂಬ ನೋಡುತ್ತ ನಲಿದಾಡುತ್ತ, ತುಂಬಿದೆದೆಯಿಂದ ಅಭಿಮಾನಪಡುತ್ತ ಬರುವಳು.

---

# ತಾಯಿ ಮಾತಾಯಿ

"ಅಮ್ಮಾ, ಇದೇಯೇನು ಡಾಕ್ಟರ್ ಚೌಧರಿಯವರ ಮನೆಯು?"

ಹೆಣ್ಣುಮಗಳ ಕೂಗನ್ನು ಕೇಳಿದೊಡನೆ, ಅಡಿಗೆಯ ಮನೆಯಲ್ಲಿ ಊಟದ ಸಿದ್ಧತೆಯಲ್ಲಿದ್ದ ಇಂದಿರಾಬಾಯಿಯವರು, ಎಲೆ-ದೊನ್ನೆ ಸಹಿತವಾಗಿಯೇ ಅಂಗಳಕ್ಕೆ ಓಡಿ ಬಂದರು.

ಬಾಗಿಲಲ್ಲೊಂದು ಟಾಂಗಾ ನಿಂತಿತ್ತು. "ಇದೇಯೇನಮ್ಮಾ ಚೌಧರಿ ಡಾಕ್ಟರರ ಮನೆಯು?"

"ಹೌದು, ತಾಯಿ; ಒಳಗೆ ಬರ್ರಿ."

ನಾಲ್ವತ್ತೈದು—ಐವತ್ತು ವರುಷದ ಇಳಿವಯಸ್ಸಿನ ಚಲುವೆಯೊಬ್ಬಳು ಹದಿನೇಳು-ಹದಿನೆಂಟರ ಸುಕುಮಾರಿಯೊಡನೆ ಇಳಿದು ಬಂದಳು.

"ಕುಳಿತುಕೊಳ್ಳಿರಿ; ಅಗೋ, ಅಲ್ಲಿ ಕುರ್ಚಿಗಳಿವೆ."

ಪುಣೆಯಲ್ಲಿ ರಾಮನಾರಾಯಣ ಚಾಳಿನ ಕಡೆಗೆ ಹೋಗುವ ದಾರಿಯಲ್ಲೊಂದು ಮಹಡಿಯ ಮನೆ. ಡಾ. ಚೌಧರಿಯವರು ಅದಕ್ಕೆ ಯಜಮಾನರು. ಮನೆಯಲ್ಲಿ ಅರಸ-ಅರಸಿಯರಿಬ್ಬರೇ. ಡಾಕ್ಟರ್ ಚೌಧರಿಯವರೂ ಈಗಿನ ಕಾಲದಲ್ಲಿ ಡಾಕ್ಟರೀ ಪರೀಕ್ಷೆಯನ್ನು ಕೊಟ್ಟವರೇ; ಆದರೂ ಈಗಿನ ಡಾಕ್ಟರರಿಗೂ ಇವರಿಗೂ ಸ್ವಲ್ಪ ವ್ಯತ್ಯಾಸ. ಉಳಿದವರು ಹೇಗೆಯೇ ಇರಲಿ—ಡಾಕ್ಟರ್ ಚೌಧರಿಯವರು ಮಾತ್ರ ದೇವರು-ಧರ್ಮಗಳ ಮೇಲೆ ಒಳ್ಳೆಯ ಶ್ರದ್ಧೆಯುಳ್ಳವರು. ಪಾಪ-ಪುಣ್ಯಕ್ಕೆ ಹೆದರಿ ನಡೆಯುವವರು. ದಿನಾಲು ಸಾಯಂಕಾಲಕ್ಕೆ ಮಡಿಯುಟ್ಟುಕೊಂಡು ದೇವರಿಗೆ ಮಂಗಳಾರತಿ ಮಾಡಲಿಕ್ಕೇ ಬೇಕು.

ಅಂದು ಸಹ ಮಡಿಯಿಂದ ಮಂಗಳಾರತಿ ಮಾಡುವದರಲ್ಲಿ ಮಗ್ನರಾಗಿದ್ದರು. ಅದು ಮುಗಿದೊಡನೆಯೆ, ಇಂದಿರಾಬಾಯಿಯವರು ಹೊರಗೆ ಯಾರೋ ಇಬ್ಬರು ಹೆಣ್ಣುಮಕ್ಕಳು ಬಂದು ಕುಳಿತಿರುವದಾಗಿ ತಿಳಿಸಿದರು.

ಇಷ್ಟು ಕತ್ತಲೆಯಾದ ಬಳಿಕ ಆದಾರು ಬಂದಿರಬಹುದೆಂದು ಅನುಮಾನಿಸುತ್ತ ಹೊರಗೆ ಬಂದರು. ದವಾಖಾನೆಯಲ್ಲಿ ಅವರಿಬ್ಬರು ತಾಯಿ-ಮಕ್ಕಳು ಇವರಿಗಾಗಿ ಕಾಯ್ದಿದ್ದರು. 'ಎಲ್ಲಿಯವರು? ಬಂದ ಕೆಲಸ ಯಾವದು?' ಎಂದು ಕೇಳಿದರು.

ಆಗ ಆ ವೃದ್ಧೆಯು ಹೇಳಿದಳು. " ಡಾಕ್ಟರಸಾಹೇಬರೆ, ನಾವು ಘೋರಪಡಿಯವರು. ಘೋರಪಡಿಯ ಶ್ರೀಧರರಾಯರು ತಮಗೆ ಒಂದು ಪತ್ರವನ್ನು ಕೊಟ್ಟಿದ್ದಾರೆ. "

ಪತ್ರವನ್ನೋದಿದರು; ಕಿಡಿಕಿಡಿಯಾದರು. " ಇಂತಹ ಹಜಾಮಗಿರಿ ಮಾಡಲಿಕ್ಕೇನೆ ಏನು ನಾನು ಡಾಕ್ಟರನಾದದ್ದು ? ನಡೆಯಿರಿ, ಹೊರಬೀಳಿರಿಲ್ಲಿಂದ! "

"ಉಶ್, ನಡೆಯವ್ವಾ ಲೀಲಾ! ಟಾಂಗಾದವಗೆ ನಿಲ್ಲಲಿಕ್ಕಾದರೂ ಹೇಳಬೇಕಿತ್ತಲ್ಲ ! " ಎನ್ನುತ್ತ ಮುದುಕಿಯು ಯಾವನಾದರೊಬ್ಬ ಟಾಂಗಾದವನು ಆ ದಾರಿಯಿಂದ ಬರುತ್ತಿರಬಹುದೇ ಎಂಬುದನ್ನು ನೋಡಲೆಂದು ಹೊರಕ್ಕೆ ಹೋದಳು.

ಅದೇ ವೇಳೆಯನ್ನು ಲೀಲೆಯು ಸಾಧಿಸಿದಳು. ಚಟ್ಟನೆದ್ದು ಮುದುಕಿಯನ್ನು ದುರುಗಟ್ಟಿ ನೋಡುತ್ತ ನಿಂತ ಡಾಕ್ಟರರ ಕಾಲುಗಳನ್ನು ಹಿಡಿದವಳೇ, "ಡಾಕ್ಟರ್‌ಸಾಹೇಬರೇ, ಶೀಘ್ರ ದಯೆ ಮಾಡಿ ನನ್ನನ್ನು ಈ ಸಂಕಟದೊಳಗಿಂದ ಪಾರು ಮಾಡಿರಿ. ಈ ರಾಕ್ಷಸಿಯ ಕೈಯಿಂದ ಬಿಡಿಸಿರಿ. ನೀವೇ ನನ್ನ ಹಡೆದ ತಾಯಿ—ನೀವೇ ನನ್ನ ತಂದೆ—ಡಾಕ್ಟರದಾದಾ........ " ಎಂದೆನ್ನುತ್ತ ಕಾಲಮೇಲೆ ಬಿದ್ದು ಅಳ-ಹತ್ತಿದಳು.

' ದಾದಾ !............' ಡಾಕ್ಟರರ ಎದೆಯಲ್ಲಿ ಎಲ್ಲಿಂದಲೋ ಕರುಣೆಯ ಝುರಿ ಹುಟ್ಟಿದಂತಾಯಿತು.

" ಆಗಲಿ, ಮಗೂ. ನಾಳೆ ಮಧ್ಯಾಹ್ನಕ್ಕೆ ಬಾ. ಆ ಮುದುಕಿಯನ್ನು ತರಬೇಡ. "

" ಪರಮಾತ್ಮನು ನಿಮಗೆ ಕಲ್ಯಾಣಮಾಡಲಿ. "

" ಬಾರಿ ಲೀಲಾ, ಟಾಂಗಾ ಬಂದ ಹಾಗಿದೆ........ಉಪಾಯ-ವಿಲ್ಲ ಬಾ........ಮತ್ತೆಲ್ಲಿಯಾದರೂ........" ಮುದುಕಿಯು ಕರೆಯ ತೊಡಗಿದಳು.

ಇಂದಿರಾಬಾಯಿಯವರು ಬಾಗಿಲ ಮರೆಗೆ ನಿಂತು ಎಲ್ಲವನ್ನೂ ಕೇಳಿದರು. ಪತಿಯು ಇನ್ನೂ ಪುತ್ತಳಿಯಂತೆ ತಟಸ್ಥರಾಗಿ ನಿಂತು ಬಿಟ್ಟಿದ್ದಾರೆ. ಕೈಯಲ್ಲಿ ಘೋರಪಡಿಯಿಂದ ಬಂದ ಅವಳ ತಮ್ಮ ಶ್ರೀಧರರಾಯನ ಪತ್ರ !

" ಹಾಳಾಗು ನೀಚಾ........" ಪತ್ರವು ಕೈಯಿಂದ ಕಳಚಿತು. ಇಂದಿರಾಬಾಯಿಯು ಓಡಿಬಂದು ತೆಗೆದಳು; ಓದಿಕೊಂಡಳು.

" ಅಯ್ಯೋ ಏನಿದು ? ಇದಕ್ಕಾಗಿಯೇ ಆ ಹುಡುಗಿಯನ್ನು ತಮ್ಮಲ್ಲಿಗೆ ಕಳಿಸಿರುವನೆ ? ' ಉಳಿದ ಸಂಗತಿಯು ಹಿಂದಿನಿಂದ ತಿಳಿಯುವದು' ಎಂದಿದ್ದಾನೆ. ಅಯ್ಯೋ ಭಾಗಾದಿ, ನೀನು ನನ್ನ ತಮ್ಮ-ನಾಗಿ ಹುಟ್ಟಬಾರದಿತ್ತು. 'ಉಳಿದ ಸಂಗತಿ' ಹಿಂದಿನಿಂದೇಕೆ, ಈಗಲೇ ತಿಳಿಯಿತಲ್ಲ, ಪಾಪಿಷ್ಟಾ ! "

" ನೋಡು, ನಿನ್ನ ತಮ್ಮನ ಘೋರಕೃತ್ಯವನ್ನು !" ಡಾಕ್ಟರ-ರೆಂದರು.

ಇಬ್ಬರೂ ಹೇಗೋ ಏನೋ ಊಟಮಾಡಿ ನಿದ್ರಿಸಿದರು. ಬೆಳಗಾಗುತ್ತಲೆ ಬೀಗನಿಗೆ ' ಕೂಡಲೆ ಹೊರಟು ಬಾ ' ಎಂದು ತಂತಿ ಬಿಟ್ಟರು. ಅವನು ಊರಲ್ಲಿಲ್ಲವೆಂದು ಜವಾಬು ಬಂದಿತು. 'ಆಯಿತು, ಫರಾರಿಯಾಗಿರಲಿಕ್ಕೆ ಸಾಕು ' ಎಂದು ಇನ್ನಿಷ್ಟು ರೇಗಿದರು. ಮಧ್ಯಾಹ್ನಕ್ಕೆ ಆ ಸುಸ್ವರೂಪಿಯಾದ ಲೀಲೆಯು ಆಕಳಿಸುತ್ತ, ಬಾಡಿದ ಮುಖದಿಂದ ಮೆಲ್ಲನಡಿಯಿಡುತ್ತ ಬಂದಳು.

" ತಂಗೀ, ಅಟ್ಟದ ಮೇಲೆ ನಡೆ—ಪೇಶಂಟ್ಸ್ ನೋಡಿಕೊಂಡು ಈಗ ಬರುವೆನು. "

ಇಂದಿರಾಬಾಯಿಯೊಡನೆಯೇ ಡಾಕ್ಟರರು ಅಟ್ಟವನ್ನು ಹತ್ತಿದರು. ಇಂದಿರಾಬಾಯಿಯನ್ನು ಕಂಡೊಡನೆ ಲೀಲೆಯು, " ಅಮ್ಮಾ, ಈ

ಪೆಟ್ಟಿಗೆಯು ತಮ್ಮ ಬಳಿಯಿರಲಿ, ನಾನು ಬೇಡಿದಾಗ ಕೊಡಿರಿ" ಎಂದು ಹೇಳಿ, ಒಂದು ಭಾರವಾದ ಚಿಕ್ಕ ಪೆಟ್ಟಿಗೆಯನ್ನು ಅವಳ ಕೈಗೆ ಕೊಟ್ಟಳು.

ಆಗಬೇಕಾದುದೆಲ್ಲ ಆಗಿಹೋಯಿತು........ಕ್ಲೋರೋಫಾರ್ಮಿನ ಮಬ್ಬು ಇಳಿದೊಡನೆ, "ಅಮ್ಮಾ, ನೀವೇ ನನ್ನ ತಾಯಿ ! ಸಾಹೇಬರೆ, ನೀವೇ ನನ್ನ ತಂದೆ !"........ಕಣ್ಣಲ್ಲಿ ನೀರು ತುಂಬಿ, ಗಂಟಲುಬ್ಬಿ ಬಂದು, ಮುಂದೆ ಮಾತು ಬರದಾದವು.

ಹತ್ತೆಂಟು ದಿನ ಶುಶ್ರೂಷೆ ಹೊಂದಿ ಲೀಲೆ ಗುಣಮುಖಳಾದಳು. ಅಂದು ಅವಳಿಗೆ ಹೋಗಬೇಕಾಗಿತ್ತು.

"ಅಮ್ಮಾ, ಅಂದು ತಮ್ಮಲ್ಲಿಡಲು ಕೊಟ್ಟ ನನ್ನ ಆ ಪೆಟ್ಟಿಗೆಯನ್ನು ತನ್ನಿರಿ."

ತೆರೆದಳು. ತುಂಬ ಬಂಗಾರದ ಆಭರಣಗಳು. ಮುತ್ತಿನ ಕಂಠಿಯೊಂದು. ಅದನ್ನು ತೆಗೆದು ಇಂದಿರಾಬಾಯಿಗೆ ಕೊಟ್ಟಳು—ಆಕೆ ತೋರಿಸಿದ ಕರುಣೆಗೆ ಪ್ರತಿದಾನವೆಂದು.

ಆಗ ಇಂದಿರಾಬಾಯಿಯು ಕೇಳಿದಳು, "ತಂಗೀ, ಹೀಗೇಕೆ ನಿನ್ನ ಅವಸ್ಥೆ ?"

"ಅಯ್ಯೋ, ಅಮ್ಮಾ, ಅದನ್ನೇನೆಂದು ಹೇಳಲಿ ?....ಮೊದಲು ನಮ್ಮ ತಾಯಿ ಕುಲೀನ ಮನೆತನದವಳು.... ಈಗಲಾದರೂ ಅಂಧ-ಸಮಾಜಕ್ಕೆ ಅವಳು ಕುಲೀನಳೇ! ಮುಂಬಯಿಯಂತಹ ದೊಡ್ಡ ಪಟ್ಟಣದಲ್ಲಿದ್ದವಳು; ಅಲ್ಲಿಯ ಸಾಹುಕಾರರ ಪತ್ನಿ. ನಾನು ಇನ್ನೂ ತಾಯ ಗರ್ಭದಲ್ಲಿರುವಾಗಲೇ ತಂದೆಗೆರವಾದೆ. ಹೆರಿಗೆಯನ್ನು ಬಳಗದವರಲ್ಲಿ ತೀರಿಸಿಕೊಂಡು, ನನ್ನೊಡನೆ ಪುಣೆಯಲ್ಲಿ ಇದ್ದಳಂತೆ. ನನಗೆ ತಿಳಿಯತೊಡಗಿದಾಗ ನನ್ನನ್ನು ಪುಣೆಯ ಬೋರ್ಡಿಂಗಿನಲ್ಲಿ ಕಲಿಯ-ಲಿಟ್ಟು ತಾನು ಘೋರಪಡಿಯಲ್ಲಿ ಮನೆಮಾಡಿದಳು. ನಾನು ಆಗಾಗ ಸೂಟಿಯಲ್ಲಿ ಬರಲಿಚ್ಛಿಸಿದರೆ, 'ಬೇಡ—ಅಭ್ಯಾಸವು ಚೆನ್ನಾಗಿ ಆಗ-ಲಾರದು....ಆಟನೋಟಕ್ಕೆ ಬಿದ್ದೆಯೆಂದರೆ ಇಲ್ಲಿಗೆ ಬಂದು!' ಎಂದು

ಬರಗೊಡಲಿಲ್ಲ. ಮುಂದೆ ನಾನು ಹುಜೂರ್ ಪಾಗಾದಲ್ಲಿರಹತ್ತಿದೆ. ನನ್ನ ಮ್ಯಾಟ್ರಿಕ್ ಪರೀಕ್ಷೆ ನಡೆದಿರುವಾಗಲೇ ಒಂದು ಪತ್ರ ಬಂದಿತು, 'ನಿನಗಿನ್ನು ನನ್ನಿಂದ ಕಲಿಸಲಾಗುವದಿಲ್ಲ; ಹೊರಟು ಬಾ' ಎಂದು. ಮೊದಲೇ ತಾಯ ದರ್ಶನಕ್ಕಾಗಿ ಹಾತೊರೆಯುತ್ತಿದ್ದ ನಾನು ಏನನ್ನೂ ವಿಚಾರಿಸದೆ ಊರಿಗೆ ಹೋದೆ............

" ನಾಲ್ಕಾರು ದಿನಗಳಲ್ಲಿಯೇ, ತಾಯಿಯೊಬ್ಬ ದೂರದ ಆಪ್ತ-ನೊಡನೆ ಬಲುದಿನಗಳಿಂದಿರಬೇಕೆಂದು ಕಂಡುಬಂದಿತು. ಇವನಾರೆಂದರೆ ತನ್ನ ಮೈದುನನೆಂತಲೂ, ಇವನೇ ನಿನಗೆ ಇಲ್ಲಿಯ ವರೆಗೆ ಕಲಿಸಿದ-ನೆಂತಲೂ ಹೇಳಿದಳು. ಆದರೆ ಮುಂದೆ ಕೆಲದಿನಗಳಲ್ಲಿಯೇ ಮೈದುನ-ಗಿಯ್ದುನ ಎಲ್ಲವೂ ಸುಳ್ಳು, ಇಬ್ಬರೂ ಕಾಮುಕ ಸಂಬಂಧವುಳ್ಳವರು —ಎಂದು ನಾನು ಪೂರ್ಣವಾಗಿ ಮನಗಂಡೆನು.

" ನನ್ನ ಮೈಯೆಲ್ಲ ಜುಮ್ಮೆಂದಿತು. ಇಂತಹ ರಾಕ್ಷಸಿಯ ಕೈಕೆಳಗೆ ನಾನಿರುವದು ಹೇಗೆ? ಎಂದು ಬೆದರಿದೆನು. ಒಂದು ದಿನ ಸಾಧಿಸಿ ಊರು ಬಿಟ್ಟು ಓಡಿಹೋದರಾಯಿತೆಂದೆ. ಡಾಕ್ಟರ್ ಸಾಹೇಬ, ಅವಳ ಸಹವಾಸದಲ್ಲಿದ್ದುದೆಂದರೆ, ಉಡಿಯಲ್ಲಿ ಬೆಂಕಿಯನ್ನು ಕಟ್ಟಿ-ಕೊಂಡಂತೆಂದು ನನಗೆ ಅನಿಸಿತು; ನಾನು ಆ ಕ್ಷಣವೇ ಓಡಬೇಕಿತ್ತು; ಏನಾದರೂ ಕೆಲವು ಆಭರಣಗಳನ್ನು ಅಪಹರಿಸಿ ದುಡ್ಡಿನ ವ್ಯವಸ್ಥೆ-ಯನ್ನು ಮುಖ್ಯವಾಗಿ ಮಾಡಿಕೊಳ್ಳುವ ಹೊರತು ಹೊರಡಬಾರದೆಂದು ಹೊಂಚುಹಾಕಿದೆ. ಆದರೆ........

" ಆದರೆ.... ಅವಳ ಸಹವಾಸದ ಪಾಪದ ಫಲವು ನನಗೂ ತಾಕಿತು. ಅದೇ ದಿವಸ ರಾತ್ರಿ, ತಮ್ಮ ಇಂದಿರಾಬಾಯಿಯ ಹಮ್ಮೆಂದಿರ ಗೆಳೆಯನಾವನೋ ಒಬ್ಬ ಕಾಮಾಂಧನು— ಅವಳ ಸಹಾ-ಯದಿಂದ ನನಗಾಗಿ ಬಂದಿದ್ದ. ನಮ್ಮ ತಾಯಿಗೆ ನಾನು ಬೇಕಾದಷ್ಟು ಹೇಳಿದೆ... ಅವನಿಗೂ ಹೇಳಿದೆ.... ಮದುವೆಯಾಗೆಂದೆ........ ಆದರೆ, ದಾದಾ, ದುಷ್ಟರು ಕೇಳಲಿಲ್ಲ.... ಹಡೆದಮ್ಮನೇ ಕೇಳಲಿಲ್ಲ. ಅನ್ಯರ ದೇನು? ಮತ್ತೆ ಅವನಾದರೂ ಏನು? ಹೇಸಿಗೆಯೊಳಗಿನ ಹುಳು

ವಿದ್ದಂತೆ! ಕ್ಲೋರೋಫಾರ್ಮಿನ ಬಲದಿಂದ..........." ಲೀಲೆಯು ಬಿಕ್ಕಿಬಿಕ್ಕಿ ಅಳತೊಡಗಿದಳು.

"ಈಗ ಆ ಮಾತಿಗೆ ಐದು ಐದೂವರೆ ತಿಂಗಳಾಯಿತು. ನಾನೊಬ್ಬ ಬಡ ಭಿಕಾರಿಯನ್ನಾದರೂ ಮದುವೆಯಾಗಿ ಸುಖದಿಂದ ಬಾಳುವೆಮಾಡುತ್ತಿರಬೇಕೆನ್ನುವಾಗ ತಾಯಿ ಈ ಪಾಡು ಮಾಡಿದ್ದನ್ನರಿತು, ಪಾಪಭೀರುವಾದ ಶ್ರೀಧರರಾಯರಿಗೆ ದಯೆ ಬಂದು, 'ತಮ್ಮ ಬಳಿ ಹೋಗಿ ಸದ್ಯದ ಪಿಡುಗು ತಪ್ಪಿಸಿ ಬಾ' ಎಂದರು. ಇದೋ, ಈ ಸಾರೆ ಬರುವಾಗ ಮಾತ್ರ ಆ ಮನೆಗೆ ಕೊನೆಯ ಶರಣು ಹೊಡೆದು, ಆಭರಣಗಳನ್ನು ಸಾಕಷ್ಟು ತೆಗೆದುಕೊಂಡು ಹೊರಬಿದ್ದಿರುವೆನು. 'ಆರೋಗ್ಯ ಹೊಂದಲು ತಿಂಗಳ ವರೆಗೆ ದವಾಖಾನೆಯಲ್ಲಿರಬೇಕಾಗುತ್ತದೆ—ನೀನು ಬರಬೇಡ—ಜನರು ಆಡಿಕೊಳ್ಳಬಹುದು' ಎಂದು ತಾಯಿಗೆ ಹೇಳಿದ್ದೇನೆ.

"ಇವನ್ನೆಲ್ಲ ಮಾರಿ ಬಂದ ಹಣವನ್ನು ಸೇವ್ಹಿಂಗ್ಸದಲ್ಲಿಟ್ಟು ಈಗಲೇ ಕಾಲೇಜು ಹಾಸ್ಟೆಲ್ ಸೇರುವೆನು. ತಕ್ಕವನು ಮುಂದು ಬಂದರೆ ವಿವಾಹಮಾಡಿಕೊಂಡು ನಿಶ್ಚಿಂತಳಾಗಿರುವೆನು; ಇಲ್ಲವಾದರೆ ಹೀಗೆಯೇ ಜನ್ಮ ನೀಗುವೆನು!"

ಅವರಿಬ್ಬರಿಗೆ ವಂದಿಸಿ, ಮನೆಯಿಂದ ಹೊರಬಿದ್ದವಳು, ಗಾಳಿಯಂತೆ ಎಲ್ಲಿಯೋ ಮಾಯವಾದಳು.

* * * *

ಇದು ಈಗ ಐದಾರು ವರುಷಗಳ ಹಿಂದಿನ ಸಂಗತಿಯಾಗಿತ್ತು; ನಾನು ಮೊನ್ನೆ ಕ್ರಿಸ್‌ಮಸ್ ರಜೆಯಲ್ಲಿ ಪ್ರಭಾತ ಸ್ಟೂಡಿಯೋ ನೋಡಿಕೊಂಡು ಬರಬೇಕೆಂದು ಪುಣೆಗೆ ಹೋಗಿದ್ದೆನು. ಡಾಕ್ಟರ್ ಚೌಧರಿಯವರಲ್ಲಿ ನನಗೆ ಮೊದಲಿನಿಂದಲೂ ಸಲುಗೆ ಬಹಳ. ಅವರಲ್ಲಿಗೆ ಹೋದಾಗ ಹಿಂದಿನ ಸಂಗತಿಯು ಜ್ಞಾಪಕಕ್ಕೆ ಬಂದಿತು.

"ಆ ಹುಡುಗಿಯ ಈಚೆಯ ವರ್ತಮಾನವೇನಾದರೂ ಮತ್ತೆ? ಮುಂದೆ ಅವಳ ಗತಿಯೇನಾಯಿತು ಡಾಕ್ಟರಸಾಹೇಬರೇ?"

ಒಳಗಿನಿಂದ ಚಹದ ಕಪ್ಪಿನೊಡನೆ ಶ್ರೀಧರರಾಯರೂ, ಫಲಾಹಾರದ ತಟ್ಟೆಯೊಡನೆ ಆ ಹುಡುಗಿಯೂ, ಬೆಸ್ನುಗುಂಟ ನೀರಿನ ತಂಬಿಗೆಯೊಡನೆ ಡಾಕ್ಟರರ ಪತ್ನಿ ಇಂದಿರಾಬಾಯಿಯೂ ಬಂದರು. ನಾನು ತುಂಬ ದಿಗಿಲುಗೊಂಡೆ.

ಅವಳ ರೂಪಕ್ಕೂ ಗುಣಕ್ಕೂ ಮನಸೋತು ಸುಧಾರಕರಾದ ಶ್ರೀಧರರಾಯರೇ ಅವಳನ್ನು ಮದುವೆಯಾಗಿ ಈಗೆರಡು ವರುಷ ವಾಗಿತ್ತಂತೆ.

ದಿನ ತುಂಬಿದವಳಾಗಿ ಈಗವಳು ಮತ್ತೆ ಡಾಕ್ಟರರಲ್ಲಿಗೆ ಬಂದಿದ್ದಳು— ಪುತ್ರವತಿಯಾಗಲೋಸುಗ !

———